# ಶ್ರೀ ವೇಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮು,

### ಶನಿ, ಭಾನು, ಸೋಮ ಮತ್ತುಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಆರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ (ಆರ್ಜಿತ)

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು
,, 5–00 ರಿಂದ 7–00 ವರೆಗೆ ಅಭಿಷೇಕ (ಆರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮುಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮುಗಳಿಂದಲೂ ಬದಲಾಯಿಸಲ್ಪಡಬಹುದು.

2. ತೋಮಾಲಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು.

3. ಸರ್ಕಾರ್ ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಪ್ಲವೋತ್ಸವ ಮಂಗಳವಾರದಲ್ಲಿ ಮಧ್ಯಾಹ್ನ 1–00 ರಿಂದ 7–00 ನಡುವೆ ಜರುಗುವುವು.



ತನು ನಿನ್ನದು ಜೀವನ ನಿನ್ನದೋ
ಅನುದಿನದಲಿ ಬಾಹೋ ಸುಖ ದುಃಖ ನಿನ್ನದಯ್ಯ

ಸವಿನುಡಿ ವೇದ ಪುರಾಣ ಶಾಸ್ತ್ರಂಗಳ
ಕಿವಿಯಿಂದ ಕೇಳೊ ಕಥೆ ನಿನ್ನದೋ
ನವಮೋಹನಾಂಗೇರ ರೂಪವ ಕಣ್ಣಿಂದ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ

ಎಡೆಗೂಡಿ ಗಂಧ ಕಸ್ತೂರಿ ಪರಿಮಳಗಳ
ಬಿಡದೆ ಲೇಪಿಸಿಕೊಂಬುದು ನಿನ್ನದು
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡುರುಚಿಗೊಂಡಿರೆ ಆ ರುಚಿ ನಿನ್ನದಯ್ಯ

ಮಾಯಾ ಪಾಶದ ಬಲೆಯೊಳಗೆ ಸಿಲ್ಕಿದ
ಕಾಯ ಪಂಚೇಂದ್ರಿಯಗಳು ನಿನ್ನವೋ
ಕಾಯಜಜನಕ ಒಡೆಯ ಆದಿಕೇಶವ
ರಾಯ ನೀನಲ್ಲದೇ ನರರು ಸ್ವತಂತ್ರರೇ

— ಶ್ರೀ ಕನಕದಾಸರು

ಸಂದರ್ಶಿಸಿ ಅನುಗ್ರಹೀತರಾಗಿ.



# ಶ್ರೀ ವೆಂಕಟೇಶ್ವರಸ್ವಾಮಿಯವರ
# ಬ್ರಹ್ಮೋತ್ಸವ ತಿರುಮಲೆ

| ತಾರೀಖು | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 19-9-82 | ಭಾನು | — | ಸೇನಾಧಿಪತಿ ಉತ್ಸವ, ಅಂಕುರಾರ್ಪಣೆ |
| 20-9-82 | ಸೋಮ | ತಿರುಚ್ಚಿ ಉತ್ಸವ, ಧ್ವಜಾರೋಹಣ | ದೊಡ್ಡ ಶೇಷವಾಹನ |
| 21-9-82 | ಮಂಗಳ | ಚಿಕ್ಕಶೇಷವಾಹನ | ಹಂಸವಾಹನ |
| 22-9-82 | ಬುಧ | ಸಿಂಹವಾಹನ | ಮುತ್ತಿನಚಪ್ಪರವಾಹನ |
| 23-9-82 | ಗುರು | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 24-9-82 | ಶುಕ್ರ | ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರ | ಮಕರಕಂಠಿ ಸಹಸ್ರನಾಮಾವಳಿ, ಶ್ರೀಲಕ್ಷ್ಮೀ ಹಾರಾದ್ಯಾಭರಣ ನೂತನ ಮೇಲ್ಕಾತ್ತು ವಸ್ತ್ರಾಲಂಕಾರದೊಡನೆ **ಗರುಡವಾಹನ** |
| 25-9-82 | ಶನಿ | ಹನುಮದ್ವಾಹನ<br>ಸಂಜೆ: ವಸಂತೋತ್ಸವ | ಗಜವಾಹನ |
| 26-9-82 | ಭಾನು | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 27-9-82 | ಸೋಮ | ರಥೋತ್ಸವ | ಅಶ್ವವಾಹನ |
| 28-9-82 | ಮಂಗಳ | ತಿರುಚ್ಚಿ ಉತ್ಸವ ಅವಭೃತೋತ್ಸವ | |

ನೀವೂ ಬನ್ನಿ; ನಿಮ್ಮವರನ್ನೂ ಕರೆತನ್ನಿ




ಗೌರವ ಸಂಪಾದಕರು:

ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ.

ಕ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ.

ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ:

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ,ಪತ್ರಿಕೆಯ-ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ.


ಸಂಪುಟ ೧೩] ಸೆಪ್ಟಂಬರ್ ೧೯೮೨ [ಸಂಚಿಕೆ ೪


# ವಿಷಯಸೂಚಿ


| | | | ಪುಟ. ಸಂ. |
|---|---|---|---|
| ಕಲ್ಲುಹಳ್ಳಿ ವೆಂಕಟರಮಣಸ್ವಾಮಿ | "ಭ್ರಮರಾ" | ... | 5 |
| ಗೊಂಬೆಪೂಜೆ ಹಾಗೂ ವಿಗ್ರಹಾರಾಧನೆ | ಶ್ರೀ ನರಸಿಂಹ ಬ್ರಹ್ಮಚಾರಿ | ... | 7 |
| ರಾಜಕಾರಣಿ ಶ್ರೀಕೃಷ್ಣ | ಶ್ರೀ ಎಸ್. ಜಯಸಿಂಹ | ... | 19 |
| ಕೆಲವು ಸುಭಾಷಿತಗಳು | ಶ್ರೀಮತಿ ಬಿ ಎಸ್. ಸರೋಜ | ... | 20 |
| ತಿರುಪತಿಯಲ್ಲಿ ಶ್ರೀಕೃಷ್ಣದೇವರಾಯ | ಡಾ॥ ಎನ್. ಅನಂತರಂಗಾಚಾರ್ | ... | 25 |
| ಸಾಧನ ಸಪ್ತಕ | "ನಿರ್ಮಲಾಪ್ರಿಯ" | ... | 33 |
| ವಾರ್ತಾಲಹರಿ | | ... | 37 |
| **ಹರಿದಾಸ ವಾಣಿ** | | | |
| ಮಹಿಪತಿದಾಸರು | ಶ್ರೀ ಆದ್ಯ ರಾಮಾಚಾರ್ಯ | ... | 9 |
| **ಯುವವಾಣಿ** | | | |
| ಸದ್ಭಕ್ತಿ | ಶ್ರೀ ಬಿ. ನ. ಕೃಷ್ಣಮೂರ್ತಿ | ... | 13 |
| ವಸಂತಪುರದ ಶ್ರೀ ವಲ್ಲಭರಾಯಸ್ವಾಮಿ | ಶ್ರೀ ಎನ್. ಮುರಳೀಧರ್ | ... | 17 |
| **ಗೃಹಲಕ್ಷ್ಮಿ** | | | |
| ಗಂಗಾದೇವಿ ವಿವರಿಸಿದ ಮಧುರಾನಗರ | ಸಿ. ವಿ. ಶೈಲಜ | ... | 23 |
| ಶ್ರೀಸ್ತುತಿ | ಶ್ರೀ ಜಿ. ಚೆನ್ನಯ್ಯ | ... | 24 |
| **ಕಿಶೋರಜಗತ್** | | | |
| ತುಕಾರಾಮ | ಶ್ರೀಮತಿ ಪ್ರೇಮಲೀಲ ನಾರಾಯಣಮೂರ್ತಿ | .. | 29 |
| ಮಹರ್ಷಿ ದಧೀಚಿ | "ರಸಿಕ ಪುತ್ತಿಗೆ" | ... | 31 |
| **ಪುಸ್ತಕ ವಿಮರ್ಶೆ** | | | |
| ನಾಲ್ಕು ಯಕ್ಷಗಾನ ಪ್ರಸಂಗಗಳು | ಶ್ರೀ ಕೆ. ಎಸ್. ರಾಮಮೂರ್ತಿ | ... | 34 |

# ಸಂಪಾದಕೀಯ

ಬ್ರಹ್ಮನೇ ಆರಂಭಿಸಿದ್ದೆಂದು ಪ್ರಸಿದ್ಧಿ ಪಡೆದ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಅನಾದಿಕಾಲದಿಂದಲೂ ಲೋಕ ಕಲ್ಯಾಣಕ್ಕಾಗಿ ಭಕ್ತಜನಪ್ರಿಯನಾದ ಶ್ರೀನಿವಾಸನಿಗೆ ನಡೆದು ಬರುತ್ತಿದೆ. ಒಂಬತ್ತು ದಿನವೂ ವಿವಿಧ ವಾಹನಗಳನ್ನೇರಿ ವಿವಿಧ ರೂಪಗಳಲ್ಲಿ ಭಕ್ತರ ಕಣ್ಮನ ತಣಿಸುವ ಸ್ವಾಮಿಯ ಬ್ರಹ್ಮೋತ್ಸವ ಕಾಲಕ್ಕೆ ದೇಶದ ಎಲ್ಲ ಭಾಗಗಳಿಂದ ಇತರ ದಿನಗಳಿಗಿಂತ ಎರಡು ಮೂರು ಪಟ್ಟು ಹೆಚ್ಚಾಗಿ ತಿರುಮಲೆಗೆ ಜನ ಬಂದು ಸೇರುತ್ತಾರೆ, ಆಗ 'ಬೆಟ್ಟದ ಮೇಲೊಂದು ಪುಟ್ಟ ಭರತಖಂಡ' ಉಂಟಾದಂತೆ ಕಂಡು ಒಂದು ಭಾವೈಕ್ಯತೆಗೆ ಪೂರಕವಾಗುತ್ತದೆ. ವಿವಿಧ ನೃತ್ಯ, ಸಭೆ ಸಮಾರಂಭಗಳಾಗುವುದಿದ್ದು ಸಂತಸ, ವಿಶೇಷಗಳು ಹೆಚ್ಚುತ್ತವೆ. ಮೊದಲೇ ತಿರುಮಲೆ ಭಕ್ತಿಯ ಪ್ರಶಾಂತತೆಗೆ ಹೆಸರಾದದ್ದು, ಮೇಲೆ ಸ್ವಾಮಿಯ ಉತ್ಸವ ಮೂರ್ತಿ ಬೀದಿಬೀದಿ ಬ್ರಹ್ಮ ನೇತೃತ್ವದಲ್ಲಿ ಮೆರವಣಿಗೆ ಹೊರಟಾಗ ಹೇಳುವುದೇನಿದೆ! ಗೋವಿಂದ ನಾಮ ಸ್ಮರಣ, ಘೋಷಗಳಿಂದ ವಾತಾವರಣ ತುಂಬಿ ಹೊಸದೊಂದು ಉಲ್ಲಾಸ ತರಂಗವನ್ನುಂಟುಮಾಡುತ್ತದೆ ಎಂಥ ಲೌಕಿಕರೂ ಸದ್ಯಃಪರನಿರ್ವೃತಿ ಹೊಂದುವರೆಂದ ಮೇಲೆ ಮೋಕ್ಷ ಕಾಮಿಗಳು ಸುಪ್ರಭಾತದಲ್ಲಿ ತಿಳಿಸುವಂತೆ ಮೋಕ್ಷದ ಅಪೇಕ್ಷೆಯನ್ನೂ ತೊರೆದು ಶ್ರೀ ವೆಂಕಟೇಶ್ವರನ ಪಾದದರ್ಶನ ಕಾಮರಾಗಿ ಇಲ್ಲಿಯೇ ಉಳಿಯಲು ಅಪೇಕ್ಷಿಸುವುದು ಸಹಜವೇ ಆಗಿದೆ. ಮನವನ್ನು, ವ್ಯಕ್ತಿಯನ್ನು ಒಂದು ಹಂತ ಮೇಲೇರಿಸಿ ಭವ್ಯತೆಯ ದರ್ಶನ ಮಾಡಿಸುವಂತಹದ್ದು ಬ್ರಹ್ಮೋತ್ಸವವಾಗಿ ಈ ಕಾಲದಲ್ಲಿ ತಿರುಮಲೆಯ ಯಾತ್ರಿಕರನ್ನು ವಿಶೇಷವಾಗಿ ಅನುಗ್ರಹಿಸುವ ಶ್ರೀನಿವಾಸನು ಸರ್ವರಿಗೂ ಮಂಗಳವನ್ನುಂಟುಮಾಡಲಿ ಎಂದು ಸಪ್ತಗಿರಿ ಹಾರೈಸುತ್ತದೆ.

ಎಲ್ಲ ಉತ್ಸವಗಳೂ ಹಬ್ಬಗಳೂ ಧಾರ್ಮಿಕವಾಗಿ ಉನ್ನತಿಯನ್ನುಂಟು ಮಾಡುವಂತೆಯೇ ಸಾಮಾಜಿಕವಾಗಿ ಭಾವೈಕ್ಯತೆಗೆ ಪೂರಕವಾಗಿದ್ದು, ಎಲ್ಲ ನಗರ, ಪಟ್ಟಣ, ಗ್ರಾಮಗಳಲ್ಲಿಯೂ ಇಂತಹ ಬ್ರಹ್ಮೋತ್ಸವಗಳಾಗಬೇಕು; (ಆಗುತ್ತಿವೆ ಕೂಡ, ಅದನ್ನು ವಿವರಿಸುವ ಎರಡು ಲೇಖನಗಳೂ ಮುಂದಿನ ಪುಟಗಳಲ್ಲಿ ಪ್ರಾತಿನಿಧಿಕವಾಗಿ ಕಾಣಬಹುದಾಗಿದೆ. ಕಲ್ಲುಹಳ್ಳಿ, ವಸಂತ ಪುರಗಳಲ್ಲಿ ನಡೆಯುವ ಉತ್ಸವಗಳು) ಹೀಗೆ ಎಲ್ಲೆಡೆಯೂ ಇಂತಹ ಬ್ರಹ್ಮೋತ್ಸವಗಳು ನಡೆದು ಈ ಉತ್ಸವಕ್ಕೆ ಹಿರಿಯರು ನೀಡಿದ ಸಾಮಾಜಿಕ ಪ್ರಾಮುಖ್ಯತೆ ಸಾರ್ಥಕವಾಗಲೆಂದು ಸಪ್ತಗಿರಿ ಬಯಸುತ್ತದೆ.



# ಕಲ್ಲುಹಳ್ಳಿ ವೆಂಕಟರಮಣಸ್ವಾಮಿ

ಬೆಂಗಳೂರಿಗೆ ಮೂವತ್ತೈದು ಮೈಲಿಗಳ ದೂರದಲ್ಲಿರುವ ಕನಕಪುರದಿಂದ ಸುಮಾರು ಒಂದೂವರೆ ಮೈಲಿಯ ಅಂತರದ ಅರ್ಕಾವತೀ ನದೀ ತೀರದಲ್ಲಿ ನೆಲೆಸಿರುವ ತಿರುಪತಿ ತಿಮ್ಮಪ್ಪನ ದೇವಸ್ಥಾನ ಕಲ್ಲುಹಳ್ಳಿಯ ವೆಂಕಟರಮಣ ಸ್ವಾಮಿ ದೇವಾಲಯ. ಕಲ್ಲುಹಳ್ಳಿ ಒಂದು ಪುಟ್ಟ ಗ್ರಾಮ, ಅದರ ಪೂರ್ವಕ್ಕೆ ಬಿಳಿಕಲ್ಲ ಬೆಟ್ಟ, ದಕ್ಷಿಣಕ್ಕೆ ಕಬ್ಬಾಳು ದುರ್ಗ, ಉತ್ತರಕ್ಕೆ ರಾಮದೇವರ ಬೆಟ್ಟ, ಪಶ್ಚಿಮಕ್ಕೆ ಬಾಣಂತಿ ಮಾರಿಯಮ್ಮನ ಬೆಟ್ಟವಿದೆ. ಇಂತಹ ಪುಣ್ಯ ಕ್ಷೇತ್ರದಲ್ಲಿ ತಿರುಪತಿ ತಿಮ್ಮಪ್ಪ ಇಲ್ಲಿ ಗಧಾಹಸ್ತಧಾರಿಯಾಗಿ ನೆಲೆಸಿ ವರ್ಷಕ್ಕೊಮ್ಮೆ ಜಾತ್ರೆಯನ್ನು ಆಚರಿಸಿಕೊಂಡು ಜನರನ್ನು ಕರೆಸಿಕೊಳ್ಳುತ್ತಾನೆ. ಇದರ ಬಗೆಗಿನ ಐತಿಹ್ಯ ಹೀಗಿದೆ:

ಸುಮಾರು ಒಂಬೈನೂರು ವರ್ಷಗಳ ಹಿಂದೆ ಕನಕಪುರವನ್ನು ಆಳುತ್ತಿದ್ದ ಅರಸು ಮನೆತನದ ರಾಜನೊರ್ವನಿಗೆ ಕನಸಿನಲ್ಲಿ ಒಬ್ಬ ದೇವತೆಯು ಪ್ರತ್ಯಕ್ಷವಾಗಿ ಈ ರೀತಿ ನುಡಿಯಿತಂತೆ.

“ಬನ್ನಿಮುಕೋಡ್ಲು ಗ್ರಾಮದ ಕಲ್ಯಾಣಿಯೊಂದರಲ್ಲಿ ನಾನು ಜಲವಾಸದಲ್ಲಿದ್ದೇನೆ. ವಸಿಷ್ಠರಿಂದ ಪೂಜಿತಗೊಂಡು ಇಲ್ಲಿರುವ ನನ್ನನ್ನು ದೇವಸ್ಥಾನವನ್ನು ನಿರ್ಮಿಸಿ ಪ್ರತಿಷ್ಠಾಪಿಸಿರಿ. ನೀವು ಹೊರಡುವ ಸ್ಥಳದಿಂದ ಕಲ್ಯಾಣಿಯವರೆಗೂ ತುಳಸೀದಳಗಳು ಚೆಲ್ಲಿರುತ್ತವೆ. ಅಲ್ಲಿಂದ ನನ್ನನ್ನು ಪ್ರತಿಷ್ಠಾಪಿಸಲು ಅನುಕೂಲ ಸ್ಥಳ ಯಾವುದೆಂದು ಚಿಂತಿಸ ಬೇಕಾಗಿಲ್ಲ, ನನ್ನ ವಿಗ್ರಹವನ್ನು ಹೊತ್ತು ಸಾಗುವ ಬಂಡಿಯ ಗಾಲಿಯ ಅಚ್ಚು ಮುರಿಯುವುದೇ ಅದಕ್ಕೆ ಸಂಕೇತ” ಎಂಬ ವಾಣಿಯಾಯಿತು. ಅದರಂತೆಯೇ ಆ ಅರಸು ರಾಜಮನೆತನದ ಬಂಡಿಯೊಂದರಲ್ಲಿ ಹೊತ್ತು ತಂದ ದೇವತಾಮೂರ್ತಿ ಕಲ್ಲುಹಳ್ಳಿಯ ಸಮೀಪಕ್ಕೆ ಬರುವಾಗ್ಗೆ ಗಾಲಿಯ ಅಚ್ಚು ಮುರಿದು ಗಾಡಿ ಮುಂದೆ ಸಾಗದಾಯಿತು. ಆ ಪುಣ್ಯ ಕ್ಷೇತ್ರವೇ ಕಲ್ಲುಹಳ್ಳಿ.

ಅರಸು ಮನೆತನದವರು ಕಲ್ಲುಹಳ್ಳಿಯಲ್ಲಿ ಮಾಘ ಶುದ್ಧ ಪೌರ್ಣಿಮೆಯಂದು ಶ್ರೀನಿವಾಸನ ದಿವ್ಯಮಂಗಳ ವಿಗ್ರಹವನ್ನು ಶಾಸ್ತ್ರೋಕ್ತವಾಗಿ ಭಕ್ತಿಯಿಂದ ಪ್ರತಿಷ್ಠಾಪನೆ ಮಾಡಿದರು. ಕಲ್ಲುಹಳ್ಳಿಗೆ ಚೋರಪುರಿ ಕಲ್ಲುಹಳ್ಳಿ ಎಂಬ ಅಭಿನಾಮದ ಐತಿಹ್ಯವೂ ಇದೆ. ಮಾಘಮಾಸ ಶುದ್ಧ ಹುಣ್ಣಿಮೆಯಂದು ಪ್ರತಿ ಸಂವತ್ಸರದಲ್ಲೂ ಕಲ್ಲುಹಳ್ಳಿಯಲ್ಲಿ ಬ್ರಹ್ಮ ರಥೋತ್ಸವ ನಡೆಯುತ್ತದೆ. ತಿರುಪತಿ ತಿಮ್ಮಪ್ಪನ ಕಳ್ಳಒಕ್ಕಲೆನಿಸಿಕೊಳ್ಳುವ ಅಸಂಖ್ಯ ಭಕ್ತಾದಿಗಳೂ ಸುತ್ತಮುತ್ತಲಿನ ನಾನಾ ಕಡೆಗಳಿಂದ ಆಗಮಿಸಿ ತಿರುಪತಿ ತಿಮ್ಮಪ್ಪನನ್ನು ನೋಡುವ ಆಸೆಯನ್ನು ಪೂರೈಸಿಕೊಳ್ಳುತ್ತಾರೆ.

ರಥೋತ್ಸವದ ದಿನ ಜಾತಿಮತಗಳ ಭೇದವಿಲ್ಲದೆ ಎಲ್ಲ ಜನಗಳೂ ರಥೋತ್ಸವದ ಸಂಭ್ರಮದಲ್ಲಿ ಪಾಲುಗೊಳ್ಳುತ್ತಾರೆ, ಆ ರಾತ್ರಿಯ ಹುಣ್ಣಿಮೆ ಬೆಳಕಿನಲ್ಲಿ ನಡೆಯುವ ಮುತ್ತಿನ ಪಲ್ಲಕ್ಕಿ ರಥೋತ್ಸವ ನೋಡಲು ಕಣ್ಣಿಗೆ ಹಬ್ಬ.

“ಭ್ರಮರಾ”

ಕಲ್ಲುಹಳ್ಳಿಯ ದೇವಸ್ಥಾನ ನಿಜಕ್ಕೂ ದೇವನ ಆಸ್ಥಾನವೇ ಸರಿ. ವಿಶಾಲವಾದ ದೇವಸ್ಥಾನದ ಪ್ರಾಕಾರದ ಮುಂಭಾಗದ ಧ್ವಜಸ್ತಂಭದ ಧೀಮಂತಿಕೆಯ ಆನಂದ ಅಲ್ಲಿ ಕಂಡೇ ಅನುಭವಿಸಬೇಕು. ದೇವಸ್ಥಾನದ ಪ್ರಾಂಗಣದಲ್ಲಿ ಎಡಭಾಗಕ್ಕೆ ಭಾವಿಯೊಂದಿದೆ, ಅದರ ಮುಂಭಾಗಕ್ಕೆ ಪವಿತ್ರ ಬೃಂದಾವನ ಪಾಕಶಾಲೆ ಮಂಟಪಗಳ ಸಾಲು. ರಥೋತ್ಸವಕ್ಕೆ ದೂರ ದೂರದಿಂದ ಬರುವ ಜನತೆ ವಿಶ್ರಮಿಸಿಕೊಳ್ಳುವುದು ಇಲ್ಲಿಯೇ. ಬಲಭಾಗಕ್ಕೆ ಆಂಜನೇಯನ ಪುಟ್ಟ ಆವಾಸಸ್ಥಾನ, ಗರುಡಗಂಭ, ಚಿಕ್ಕ ಗೋಪುರ ಬಾಗಿಲಿದೆ.

ರಥೋತ್ಸವದ ಸಮಾರಂಭಕ್ಕೆ ಆಗಮಿಸುವವರಿಗೆ ಇಳಿದುಕೊಳ್ಳಲು ಅನುಕೂಲವಾದ ತಂಗುದಾಣ ಈ ಮಂಟಪ.

ಗರ್ಭಗೃಹದಲ್ಲಿ ಶ್ರೀನಿವಾಸನಾದರ ಸುಕನಾಸಿಯ ಬಾಗಿಲನಲ್ಲ ಶ್ರೀನಿವಾಸನ ರಕ್ಷಣೆಗೆ ತಾನು ಸದಾ ಸಿದ್ಧನಿರುವನೋ ಎಂಬಂತಿರುವ ಆದಿಶೇಷನ ಸನ್ನಿಧಿ. ದೇವಸ್ಥಾನದ ಒಳ ಮಂಟಪದಲ್ಲ ಹುಂಡಿಯ ಆವಾಸ ಸ್ಥಾನ, ಅನಂತರ ಅಷ್ಟಾಕ್ಷರ ಮಂಟಪ.

ಕಲ್ಲುಹಳ್ಳಿಯನ್ನು ಸಮೀಪಿಸುವ ಮೊದಲೇ ಸಿಗುವ ಆಂಜನೇಯನ ದೇವಸ್ಥಾನ ಶ್ರೀನಿವಾಸನ ರಕ್ಷಣೆಗೆ ತಾನು ಕಾವಲಿರುವುದನ್ನು ನಿಶ್ಚಿತ ಮಾಡಿಕೊಡುತ್ತದೆ.

ಶ್ರೀನಿವಾಸನ ರಕ್ಷಣೆಗೆ ಕಾವಲಿರುವ ಮತ್ತೊಬ್ಬ ದೇವತೆ ಗ್ರಾಮದೇವತೆ ಮಾರಮ್ಮ.

ದೇವಸ್ಥಾನದ ಭವ್ಯತೆಗೆ ಸರಿ ಸಮಾನವಾಗಿ ಆದಿಯಿಂದಲೂ ಭಗವಂತನಿಗೆ ತನ್ನ ಕೈಂಕರ್ಯವನ್ನು ಸಲ್ಲಿಸುತ್ತ ತಂಪು ನೀಡುತ್ತಾ ಬೃಹತ್ ವೃಕ್ಷವಾಗಿ ನೆಲೆಸಿರುವ ಅಶ್ವತ್ಥ ವೃಕ್ಷವೊಂದಿದ

ಸುಕನಾಸಿಯ ಮಂಟಪದಲ್ಲಿ ದೇಶಿಕಾಚಾರ್ಯ, ವರದಾಚಾರ್ಯ, ರಾಮಾನುಜಾಚಾರ್ಯರ ಮೂರ್ತಿಗಳಿವೆ. ಶ್ರೀನಿವಾಸನ ಎಡಬಲದಲ್ಲ ಶ್ರೀದೇವಿ, ಭೂದೇವಿಯರಾದರ ಒಂದೆಡೆ ಆದಿಶೇಷನ ಕೈಂಕರ್ಯದ ಸೊಬಗು ಎಂತಹ ನಾಸ್ತಿಕರನ್ನಾದರೂ ಆಸ್ತಿಕರನ್ನಾಗಿಸುತ್ತದೆ.

ಕಲ್ಲುಹಳ್ಳಿಯ ಮತ್ತೊಂದು ವೈಶಿಷ್ಟ್ಯ ಇಲ್ಲಿಯ ತುಳಸೀ ವನಗಳು.

ಪ್ರತಿ ಸಂವತ್ಸರದಲ್ಲೂ ಮಾಘಶುದ್ಧ ಹುಣ್ಣಿಮೆಯಂದು ಇಲ್ಲಿ ನಡೆಯುವ ಬ್ರಹ್ಮ ರಥೋತ್ಸವಕ್ಕೆ ಭಗವಂತ ಚೋರನ ತಿರುಪತಿ ತಿರುಪತಿಯಿಂದ ಆಗಮಿಸಿ ಭಕ್ತರನ್ನು ಹರಸುವನೆಂದು ನಂಬಿಕೆ ಪ್ರತೀತಿ ಇದೆ

ತಿರುಪತಿಯ ದೇವಸ್ಥಾನದ ರೀತಿಯಲ್ಲಿ ಇಲ್ಲಿಯೂ ಗರ್ಭಗುಡಿಯ ಮೇಲ್ಭಾಗದಲ್ಲಿ ದಿವ್ಯ ವಿಮಾನ ವೊಂದಿದೆ.

ಇತ್ತೀಚೆಗೆ ಧರ್ಮಸ್ಥಳದ ವೀರೇಂದ್ರ ಹೆಗ್ಗಡೆಯವರು ಶ್ರೀಮಂಜುನಾಥನ ಹೆಸರಿನಲ್ಲಿ ಕಲ್ಯಾಣ ಮಂಟಪವೊಂದನ್ನು ಕಟ್ಟಿಸಿದ್ದಾರೆ. ಇದಕ್ಕೆ ದಾನನೀಡಿದ ಭೂಮಿ ಶ್ರೀಅಷ್ಟಾಕ್ಷರಂ ನಾರಾಯಣಯ್ಯಂಗಾರರದು. ಇವರು ಅಷ್ಟಾಕ್ಷರ ಯಾಗ ಕರ್ತೃಗಳಾದ್ದರಿಂದ ಅವರನ್ನು ಅದೇ ಹೆಸರಿನಲ್ಲಿ ಕರೆಯುವ ವಾಡಿಕೆ ಅಲ್ಲಿ ಕಂಡು ಬರುತ್ತದೆ.

ಭಗವಂತನ ಸೇವೆಗಳಾದ ಬ್ರಹ್ಮ ರಥೋತ್ಸವ, ಕಲ್ಯಾಣೋತ್ಸವ ತೆಪ್ಪೋತ್ಸವಗಳು ನೋಡುವವರ ಕಣ್ಣಿಗೆ ಹಬ್ಬ.

ರಾತ್ರಿಯ ವೇಳೆಯಲ್ಲಿ ಮುತ್ತಿನ ಪಲ್ಲಕ್ಕಿ ಉತ್ಸವ ಮನರಂಜನೆಗಾಗಿ ನಡೆಯುವ ಕೀಲು ಕುದುರೆ ನೃತ್ಯಗಳು, ವಿವಿಧ ವೇಷ ವಿನೋದಾವಳಿಗಳೂ ಇಲ್ಲಿನ ಮುಖ್ಯ ಆಕರ್ಷಣೆಗಳಾಗಿವೆ. ಕೂಡ, ರಥೋತ್ಸವಕ್ಕಾಗಿ ಆಗಮಿಸುವ ಜನಗಳಿಗೆ ಊಟ ವಿಶ್ರಾಂತಿಗಳಿಗೆ ತೊಂದರೆಯಾಗದಂತೆ ಅರವಟ್ಟಿಗೆಗಳೂ, ಇತರ ಏರ್ಪಾಡುಗಳೂ ನಡೆಯುತ್ತವೆ, ಅರ್ಕಾವತೀ ನದಿಯ ಪ್ರಶಾಂತ ವಾತಾವರಣದ ದಂಡೆಯ ಮೇಲಿನ ತೋಪಿನ ಪ್ರಕೃತಿಯ ಮಡಿಲಿನಲ್ಲಿ ದೇವರ ಪ್ರಸಾದವನ್ನು ಭಕ್ತರು ಸಂತೃಪ್ತಿಯಿಂದ ಜಾತಿ ಭೇದವಿಲ್ಲದಂತೆ ಭುಂಜಿಸುತ್ತಾರೆ. ಅದೊಂದು ಹರ್ಷದ ವಾತಾವರಣ. ಅಲ್ಲಿ ಸುಮಂಗಲಿಯರಿಗೆ ಅರಿಶಿನ ಕುಂಕುಮ ಹೂಗಳ ವಿನಿಯೋಗವಾಗುತ್ತದೆ, ಭಗವಂತನ ಈ ಲೀಲಾ ವಿನೋದದಲ್ಲಿ ಭಕ್ತನ ಈ ಅಲೌಕಿಕ ಆನಂದದ ಅನುಭವದ ಸಮರ್ಪಣೆ.

# ಗೊಂಬೆಪೂಜೆ ಮತ್ತು ವಿಗ್ರಹಾರಾಧನೆ

ಪರಮ ಪುರುಷನಾದ ಭಗವಂತನ ಶ್ರೀ ವಿಗ್ರಹದ ಅಥವಾ ಅರ್ಚಾಮೂರ್ತಿಯ ಶಾಸ್ತ್ರೋಕ್ತ ಆರಾಧನೆಯು ಸನಾತನಧರ್ಮದ ಶ್ರೇಷ್ಠವಾದ ಹಾಗೂ ಪ್ರಧಾನವಾದ ಒಂದು ಅದ್ವಿತೀಯ ವೈಶಿಷ್ಟ್ಯವಾಗಿದೆ. ಸಚ್ಚಿದಾನಂದ ವಿಗ್ರಹನಾದ ಭಗವಾನ್ ಶ್ರೀಹರಿಯು ಅನಂತ ಶಕ್ತಿಗಳಿಗೆ ಅಧೀಶ್ವರನು. ಇವುಗಳಲ್ಲಿ ಪ್ರಧಾನವಾದುದು ಭಗವಂತನ ಅಂತರಂಗಶಕ್ತಿಯು. ಇದರ ತ್ರಿವಿಧ ವೃತ್ತಿಗಳಾದ ಸಂಧಿನೀ, ಸಂಬಿತ್ ಹಾಗೂ ಹ್ಲಾದಿನೀ ವೃತ್ತಿಗಳಲ್ಲಿ ಭಗವಂತನ ನಿತ್ಯವೂ, ಚಿನ್ಮಯವೂ ಆದ ವಿಗ್ರಹ, ವೈಕುಂಠ ಧಾಮ, ಲೀಲಾವಿಲಾಸ ಇತ್ಯಾದಿಗಳು ನಿತ್ಯ ಸತ್ತಾರೂಪವಾದ ಸಂಧಿನಿಯ ಮೂಲಕವಾಗಿ ಪ್ರಕಟಿತವಾದವುಗಳಾಗಿವೆ. ಪರತತ್ತ್ವವಾದ ಭಗವಂತನು ಪ್ರಾಕೃತ ದೇಶ–ಕಾಲಗಳಿಗೆ ಅತೀತನಾಗಿದ್ದು ನಿತ್ಯಕಾಲನಾಗಿ ಅವಸ್ಥಿತನಾಗಿರುವಂತೆ ಭಗವಂತನ ದಿವ್ಯನಾಮಗಳೂ, ಶ್ರೀವಿಗ್ರಹವೂ ನಿತ್ಯಕಾಲವಾಗಿ ವರ್ತಮಾನವಾಗಿವೆ. ಇವುಗಳು ಮಾನವ ಮಸ್ತಿಷ್ಕದ ಕಲ್ಪನೆಗಳಿಗೆ ಅತೀತವಾದವುಗಳಾಗಿವೆ

### ಶ್ರೀ ವಿಗ್ರಹದ ವೈಶಿಷ್ಟ್ಯ :—

ಕೇವಲವಾಗಿ ವಿಧರ್ಮಿಯರು ಹಾಗೂ ಭಾರತೇತರ ವಾಸಿಗಳು ಮಾತ್ರವಲ್ಲದೆ; ಹಿಂದೂಗಳೆಂದು ಕರೆಯಲ್ಪಡುವವರಲ್ಲಿಯೂ ಅನೇಕರು ಭಗವಂತನ ಶ್ರೀ ವಿಗ್ರಹದ ವಿಷಯದಲ್ಲಿ ಅಜ್ಞರೂ, ತಪ್ಪಭಿಪ್ರಾಯವನ್ನು ಹೊಂದಿದವರೂ ಆಗಿರುವರು. ಪ್ರಥಮವಾಗಿ ನಾವು ತಿಳಿದಿರಬೇಕಾದುದೇನೆಂದರೆ ಸನಾತನ ಧರ್ಮವು ಆತ್ಮಸಾಕ್ಷಾತ್ಕಾರರೂಪವಾದ ನಿತ್ಯಧರ್ಮವು. ಪ್ರಾಕೃತವಾದ ಇಂದ್ರಿಯ ಗ್ರಾಹ್ಯ ವಿಷಯಗಳೂ, ಮನೋಧರ್ಮವೂ, ಜಾಗತಿಕ ಕಲ್ಪನೆಗಳೂ ಸನಾತನಧರ್ಮದಲ್ಲಿ ಸ್ಥಾನ ಗಳಿಸಿರುವುದಿಲ್ಲ. ಭಗವದ್ವಿಷಯದಲ್ಲಿ ಅಜ್ಞರಾದವರು ಶ್ರೀ ವಿಗ್ರಹಾರಾಧನೆಯನ್ನು ಪೌತ್ತಲೀಕತೆ ಅಥವಾ ಗೊಂಬೆಪೂಜೆಗೆ ಸಮಾನವಾದುದಾಗಿ ತಿಳಿಯುವರು. ಆದರೆ, ಪ್ರಕೃತವಾಗಿ ಶ್ರೀ ವಿಗ್ರಹಾರಾಧನೆಗೂ ಗೊಂಬೆಪೂಜೆಗೂ ಪರಸ್ಪರ ಆಕಾಶ–ಪಾತಾಳಗಳಷ್ಟು ಭೇದವು ವಿದ್ಯಮಾನವಾಗಿದೆ. ಸನಾತನಧರ್ಮವು ಗೊಂಬೆಪೂಜೆ (Idolatry) ಯನ್ನು ಎಂದಿಗೂ ಸಮರ್ಥಿಸುವುದಿಲ್ಲ. ಅತ್ಯಂತ ಶ್ರೇಷ್ಠವಾದ ಮಾನವವಿಚಾರದಲ್ಲಿ ಹಾಗೂ ಅತಿಮಾನವ ವಿಚಾರದಲ್ಲಿ ಅಂತರ್ನಿಹಿತವಾಗಿರುವ ಸಮಸ್ತ ಉದಾತ್ತಗುಣಗಳು ಭಗವಂತನಲ್ಲಿ ಪೂರ್ಣವಾಗಿ ಇರುತ್ತವೆ. ಸಮಗ್ರವಾದ ಐಶ್ವರ್ಯ, ವೀರ್ಯ, ಯಶ, ಶ್ರೀ, ಜ್ಞಾನ ಹಾಗೂ ವೈರಾಗ್ಯ— ಇವುಗಳು 'ಭಗ' ಎಂಬ ಶಬ್ದದಿಂದ ಸೂಚಿತವಾಗುತ್ತವೆ. ಈ ಅಪ್ರಾಕೃತ ಗುಣಗಳನ್ನು ಸಂಪೂರ್ಣವಾಗಿ ಹೊಂದಿದ ಪರಮಪುರುಷನೇ ಭಗವಂತನು.

### ಭಗವಂತನ ಆಕಾರ :—

ಪರಮೇಶ್ವರನು ಪರಸ್ಪರ ವಿರುದ್ಧವಾದ ಅನಂತ ಗುಣಗಳಿಗೆ ಆಶ್ರಯ ಸ್ವರೂಪನಾದವನು. ಭಗವಂತನ ಅಚಿಂತ್ಯಶಕ್ತಿಗಳಲ್ಲಿ ಒಂದಾದ ವಿರೋಧಭಂಜಿಕಾ ಶಕ್ತಿಯ ಪ್ರಭಾವದಿಂದ ಪರಸ್ಪರ ವಿರುದ್ಧವಾದ ಈ ಗುಣಗಳು ಆತನಲ್ಲಿ ಅವಿರೋಧವಾಗಿ ಅವಸ್ಥಿತವಾಗಿರುತ್ತವೆ. ಇದು ಮಾನವರ ಯುಕ್ತಿ – ತರ್ಕಗಳಿಗೆ ಅತೀತವಾದುದಾಗಿದೆ. ಸೀಮಾರಹಿತವಾದ ಬೃಹತ್ತ್ವವೂ, ಅಣುತ್ವವೂ ಭಗವದ್ವಸ್ತುವಿನ ಗುಣಗಳಾಗಿವೆ. ತನ್ನ ಅಚಿಂತ್ಯ ಶಕ್ತಿಯ ಕಾರಣದಿಂದಾಗಿ ಭಗವಂತನು ಏಕಕಾಲದಲ್ಲಿ ನಿರಾಕಾರನೂ ಸಾಕಾರನೂ ಆಗಿರುವನು. ಜಡಚಕ್ಷುಗಳು ಭಗವಂತನ ಸಚ್ಚಿದಾನಂದ ರೂಪವನ್ನು ಕಾಣಲಾರವು. ಇದರಿಂದಾಗಿ ಜಾಗತಿಕ ಜನರು ಆತನನ್ನು ನಿರಾಕಾರನಾಗಿ ತಿಳಿಯುವರು. ಮರಣಶೀಲರಾದ ಪ್ರಾಣಿಗಳಂತೆ ರಕ್ತ–ಮಾಂಸಗಳಿಂದ ಕೂಡಿದ ಹೇಯ ಶರೀರವನ್ನು ಈಶ್ವರನು ಹೊಂದಿರುವುದಿಲ್ಲ, 'ಅಪಾಣಿಪಾದೋ ಜವನೋ ಗ್ರಹಿತಾ....' ಮೊದಲಾದ ಶ್ರುತಿವಚನಗಳು ಭಗವಂತನ ಪ್ರಾಕೃತರೂಪವನ್ನು ನಿಷೇಧಿಸಿ, ಅಪ್ರಾಕೃತವೂ ನಿತ್ಯವೂ ಆದ ಸಚ್ಚಿದಾನಂದ ಸ್ವರೂಪವನ್ನು ಸ್ಥಾಪಿಸುತ್ತವೆ. ಭಗವಂತನ ನಿತ್ಯವಾದ ಸಾಕಾರತ್ವವನ್ನು ಅಲ್ಲಗಳೆಯುವುದು ಆತನ ಅಚಿಂತ್ಯಶಕ್ತಿಯ ನಿರಾಕರಣೆಯಾಗಿದ್ದು, ಕೇವಲ–ನಿರಾಕಾರವಾದವನ್ನು ಸಮರ್ಥಿಸುವವರು ಘೋರತರವಾದ ಅಪರಾಧಿಗಳಾಗಿರುತ್ತಾರೆ. ಜಾಗತಿಕ ದರ್ಶನಕ್ಕೆ ಅತೀತವಾದ ಚಿನ್ಮಯ ಸ್ವರೂಪವನ್ನು ಶುದ್ಧ ಜೀವಾತ್ಮರು ತಮ್ಮ ಭಕ್ತಿನೇತ್ರಗಳಿಂದ ಕಾಣುವರು. ಶ್ರೀ ಬ್ರಹ್ಮಸಂಹಿತೆಯ ಪ್ರಮಾಣದಂತೆ, ಆದಿಪುರುಷನಾದ ಶ್ರೀಕೃಷ್ಣನ ಶ್ಯಾಮಸುಂದರ ರೂಪವನ್ನು ಶುದ್ಧ ಭಕ್ತರು ಪ್ರೇಮಾಂಜನಯುಕ್ತವಾದ ಭಕ್ತಿಲೋಚನಗಳಿಂದ ತಮ್ಮ ಹೃದಯಗಳಲ್ಲಿ ನಿತ್ಯವಾಗಿ ದರ್ಶಿಸುತ್ತಾರೆ. ದಿವ್ಯ ಚಕ್ಷುಗಳಿಂದ ವಂಚಿತರಾದವರು ದಿವ್ಯಪುರುಷನಾದ ಗೋವಿಂದನ ದರ್ಶನವನ್ನು ಪಡೆಯಲಾರರು.

### ಭಕ್ತಿಯೋಗವೇ ಏಕಮಾತ್ರವಾದ ಉಪಾಯ

ಭಗವಂತನ ಅನುಗ್ರಹಕ್ಕೆ ಪಾತ್ರರಾಗಿ ಭಗವದ್ದರ್ಶನವನ್ನು ಗಳಿಸಿದ ಮಹಾಪುರುಷರು ತಮ್ಮ ಪರಿಶುದ್ಧವಾದ ಹೃದಯಗಳಲ್ಲಿ ದೃಷ್ಟವಾದ ಶ್ರೀಹರಿಯ ಸಚ್ಚಿದಾನಂದ ವಿಗ್ರಹವನ್ನು ಮಾನವರ ನಿತ್ಯಶ್ರೇಯದ ಸಲುವಾಗಿ ಜಗತ್ತಿನಲ್ಲಿ ಅರ್ಚಾವಿಗ್ರಹದ ರೂಪದಲ್ಲಿ ಸ್ಥಾಪಿಸುವರು. ಈ ಅರ್ಚಾವಿಗ್ರಹವನ್ನು ಮಾನವ ಕಲ್ಪಿತವಾದ ಗೊಂಬೆಯೆಂದು ತಪ್ಪಾಗಿ ತಿಳಿಯಬೇಕಾಗಿಲ್ಲ. ಮಾಯಾಧೀಶನಾದ ಭಗವಂತನು ಪ್ರಾಕೃತ ಜಗತ್ತಿನಲ್ಲಿ ಅವತರಿಸಿಯೂ ಪ್ರಾಕೃತ ಮಾಯೆಗೆ ಸರ್ವದಾ ಅತೀತನಾಗಿರುವಂತೆಯೇ ಶುದ್ಧಭಕ್ತರ ಹೃದಯದಿಂದ ಆವಿರ್ಭೂತವಾದ ಭಗವದ್ವಿಗ್ರಹವೂ ಮಾಯಾತೀತನಾಗಿದ್ದು ಅಚಿಂತ್ಯ ಶಕ್ತಿಯಿಂದ ಕೂಡಿರುತ್ತದೆ. ಭಗವತ್ಪ್ರೇಮಯುಕ್ತನಾದ ಪರಿಶುದ್ಧ ಜೀವಾತ್ಮನೇ ಭಗವಂತನ ನಿತ್ಯ ಚಿನ್ಮಯವಿಗ್ರಹವನ್ನು ದರ್ಶಿಸಬಲ್ಲನು. ಇದನ್ನು ಮನಸ್ಸಿನಲ್ಲಿ ಧ್ಯಾನಿಸುವಾಗ ಸ್ವಲ್ಪ ಮಟ್ಟಿಗೆ ಜಾಗತಿಕಭಾವಗಳು ಮನಸ್ಸನ್ನು ಆಕ್ರಮಿಸುವುವು. ಹಾಗೂ ಶ್ರೀ ವಿಗ್ರಹೋಪಾಸನೆಯು ಮಾನವರ ಇಂದ್ರಿಯಗಳಿಂದ ಕೃತವಾಗುತ್ತಿರುವಾಗ ಅಧಿಕತರದ ಪ್ರಾಕೃತ ವಿಷಯಗಳಿಂದ ಉಪಾಸನೆಯು ಮಿಶ್ರಿತವಾಗುತ್ತದೆ. ಸುತರಾಂ, ಸಾಧಕರಾದವರು ಈ ತ್ರಿವಿಧ ಪ್ರಕರಣಗಳಲ್ಲಿಯೂ ಸಂಪೂರ್ಣವಾಗಿ ಅಪ್ರಾಕೃತ ಭಾವಗಳನ್ನು ಅವಲಂಬಿಸಿ ಅರ್ಚಾವಿಗ್ರಹವನ್ನು ಸೇವಿಸಬೇಕು. ಇದುವೇ ಶುದ್ಧವಾದ ಉಪಾಸನೆಯ ರಹಸ್ಯವಾಗಿದೆ. ಭಗವಂತನ ಚಿನ್ಮಯ ಸ್ವರೂಪದ ಆತ್ಮಸಾಕ್ಷಾತ್ಕಾರದಲ್ಲಿ ಪ್ರೇಮಪೂರ್ಣವಾದ ಜೀವಾತ್ಮನ ಮನಸ್ಸಿನಲ್ಲಿ ಭಕ್ತಿಮೂಲಕವಾದ ಭಗವದ್ಭಾವಗಳು ಉದಯಿಸಿ ಸಂಪೂರ್ಣವಾಗಿ ವ್ಯಾಪಿಸುವುವಲ್ಲದೆ ಭಕ್ತಿಯ ಪ್ರಭಾವ ಭಕ್ತರ ಶರೀರಗಳಲ್ಲಿಯೂ ಪ್ರಕಟವಾಗುವುವು. ಚಿತ್ತಾಕರ್ಷಕವಾದ ಶ್ರೀ ಮೂರ್ತಿಯು ಭಕ್ತಿಯೋಗದ ಪ್ರಭಾವದಿಂದ ಈ ರೀತಿಯಾಗಿ ಜಗತ್ತಿನಲ್ಲಿ ಆವಿರ್ಭವಿಸುವುದು. ಭಗವಂತನ ಅಚಿಂತ್ಯ ಶಕ್ತಿಯ ಕಾರಣವಾಗಿ ಮುಕುಲಿತವಾದ ಹಾಗೂ ವಿಕಸಿತವಾದ ಭಗವದ್ಭಾವಗಳೆಲ್ಲವೂ ಸರ್ವಥಾ ನಿರ್ದೋಷವಾದವು

**ಶ್ರೀ ನರಸಿಂಹ ಬ್ರಹ್ಮಚಾರಿ**

ಗಳಾಗಿವೆ ಧರ್ಮಾಚರಣೆಯು ಆಶಿತಫಲವಾದ ಆತ್ಮಪ್ರಸನ್ನತೆಯನ್ನು ಶ್ರೀ ವಿಗ್ರಹೋಪಾಸನೆ ಯಿಂದಲೇ ನಿಶ್ಚಯವಾಗಿಯೂ ಸುಲಭವಾಗಿಯೂ ಗಳಿಸಬಹುದಾದುದರಿಂದ ಶ್ರೀ ಮೂರ್ತಿಯನ್ನೂ, ಶ್ರೀ ಮೂರ್ತಿಯ ಉಪಾಸಕರನ್ನೂ ನಿಂದಿಸುವ ವರು ಕೇವಲವಾಗಿ ಪಾಷಂಡರಾಗಿರುತ್ತಾರೆ.

ಆರಾಧನೆಯ ಅಧಿಕಾರ ವಿಚಾರ

ಅರ್ಚಾವಿಗ್ರಹದ ಅನುಭೂತಿರಹಿತವಾದ ಅಜ್ಞರು ಶ್ರೀ ಮೂರ್ತಿಯ ಸ್ಥಾಪನೆಯಲ್ಲಿ ಅನಧಿ ಕಾರಿಗಳಾಗಿರುವರು. ಇಂತಹ ಅನಧಿಕಾರಿಗಳು ಶ್ರೀ ಮೂರ್ತಿಯ ಸ್ಥಾಪನೆಯನ್ನು ಅನುಕರಿಸಿದಲ್ಲಿ ಅದು ಪೌತ್ತಳೀಕತೆಯೆಂದು ತಿಳಿಯಲ್ಪಡುತ್ತದೆ. ಸಾಧಕರಾದವರು ಸಂಬಂಧಜ್ಞಾನದ ಮೂಲಕ ವಾಗಿ ಭಗವಂತನನ್ನು ಆರಾಧಿಸುವರು. ಭಕ್ತಿ ಮಾರ್ಗದ ಆಚಾರ್ಯರಿಂದ ಲಬ್ಧದೀಕ್ಷನಾದ ಸಾಧಕನು ದಿವ್ಯಜ್ಞಾನವನ್ನು ಗಳಿಸಿ, ಅರ್ಚಾ ವಿಗ್ರಹವನ್ನು ಸಾಕ್ಷಾತ್ತಾಗಿ ಭಗವಂತನಿಂದ ಅಭಿನ್ನವೆಂದಾಗಿ ತಿಳಿದು ಪ್ರೀತಿಪೂರ್ವಕವಾಗಿ ಷೋಡಶೋಪಚಾರಗಳಿಂದ ಸೇವಿಸುವನು. ಭಕ್ತಿ ಹೀನರಾದವರು ಅರ್ಚಾವಿಗ್ರಹವನ್ನು ಸಾಧಾರಣ ವಾದ ಜಾಗತಿಕ ವಸ್ತುಗಳಲ್ಲಿ ಒಂದಾಗಿ ಭಾವಿಸಿ ಅದನ್ನು ಕಲ್ಲು, ಮಣ್ಣು, ಧಾತು, ಮರ ಇತ್ಯಾದಿ ಗಳಿಗೆ ಸಮಾನವಾಗಿ ತಿಳಿಯುವರು. ಸಮಸ್ತ ಜಾಗತಿಕ ವಸ್ತುಗಳು ಅನಿತ್ಯವಾದವುಗಳಾಗಿದ್ದು ಇವುಗಳಿಂದ ಅತ್ಯಂತವಾಗಿ ವಿಲಕ್ಷಣನಾದ ಭಗವಂತನು ಶಾಶ್ವತ ಪುರುಷನು. ಇದರಿಂದಾಗಿ ಭಗವಂತನ ಅರ್ಚಾವಿಗ್ರಹವನ್ನು ವಿನಾಶಶೀಲ ವಾದ ವಸ್ತುಗಳಲ್ಲಿ ಒಂದಾಗಿ ಭಾವಿಸಬೇಕಾಗಿಲ್ಲ.

ಶ್ರೀ ವಿಗ್ರಹ ದ್ವೇಷಿಗಳು

ಸರ್ವಕಾರ್ಯ ಕಾರಣನಾದ ಭಗವಂತನು ತನ್ನ ನಿತ್ಯವಾದ ನಾಮ, ರೂಪ, ಗುಣ, ಲೀಲೆ, ಪರಿಕರ, ವೈಶಿಷ್ಟ್ಯ, ಧಾಮ ಇತ್ಯಾದಿಗಳಿಂದ ಕೂಡಿರುವನಾದುದರಿಂದ ; ಬಹಿರ್ಮುಖ ಜೀವರ ಕಾರಾಗೃಹ ರೂಪವಾಗಿ ಭಗವಂತನಿಂದ ಸೃಷ್ಟಿ ಯಾಗಿರುವ ಮಾಯಿಕ ಬ್ರಹ್ಮಾಂಡಗಳೂ ನಾಮ, ರೂಪ, ಗುಣ ಇತ್ಯಾದಿಗಳಿಂದ ಕೂಡಿದೆ. ಪ್ರಾಕೃತ ಜಗತ್ತು ಕೇವಲವಾಗಿ ವೈಕುಂಠ ಜಗತ್ತಿನ ವಿಕೃತವಾದ ಹಾಗೂ ಪರಿಣಾಮಶೀಲ ವಾದ ಪ್ರತಿಫಲನವಾಗಿದೆ. ಪರಮೇಶ್ವರನ ನಿತ್ಯ ವಾದ ನಾಮ, ರೂಪ ಇತ್ಯಾದಿಗಳನ್ನು ಸ್ವೀಕರಿಸ ದಿರುವ ನಾಸ್ತಿಕರು ಅಪರಾಧಿಗಳೂ, ಅಸುರ ಪ್ರಕೃತಿಯವರೂ ಆಗಿರುವರು.

ಅಷ್ಟವಿಧ ಅರ್ಚಾವಿಗ್ರಹಗಳು :—

ಭಕ್ತಿಯೋಗದ ಪ್ರಭಾವದಿಂದ ಜಗತ್ತಿನಲ್ಲಿ ಪ್ರಕಟವಾಗಿರುವ ಚಿದ್ವಿಗ್ರಹಗಳು ಭಕ್ತರಿಂದ ಇಹ ಜಗತ್ತಿನಲ್ಲಿ ಪ್ರತಿಷ್ಠಿತವಾಗುತ್ತವೆ. ಶಾಸ್ತ್ರ ಪ್ರಮಾಣದಂತೆ ಈ ಅರ್ಚಾವಿಗ್ರಹಗಳು ಎಂಟು ವಿಧವಾಗಿದ್ದು ಪ್ರಸ್ತರಮಯ, ದಾರುಮಯ, ಲೇಪಿತ, ಲಿಖಿತ, ಸೈಕತಮಯ, ಮಣಿಮಯ ಹಾಗೂ ಮನೋಮಯವಾದ ಪ್ರತಿಮೆಗಳೆಂದು ತಿಳಿಯಲ್ಪಡುತ್ತವೆ. ಮಹಾಪುರುಷರಾದ ವೇದ ವ್ಯಾಸರು, ನಾರದರು, ಪ್ರಹ್ಲಾದ, ಸನಕಾದಿಗಳು ಇತ್ಯಾದಿಗಳಾದ ಪರಮ ಭಕ್ತರಿಂದ ಆನೀತವಾಗಿ ಜಗತ್ತಿನಲ್ಲಿ ಜೀವಕಲ್ಯಾಣಾರ್ಥವಾಗಿ ಪ್ರಕಟಿ ಸಲ್ಪಟ್ಟ ಭಗವದ್ವಿಗ್ರಹಗಳನ್ನು ಆದರಿಸದವರು ಹಾಗೂ ಪೂಜಿಸದವರು ತೀರ ದೌರ್ಭಾಗ್ಯರಾ ಗಿದ್ದು ಯಾವ ಕಾಲಕ್ಕೂ ಅವರು ಆತ್ಮಪ್ರಸನ್ನತೆ ಯನ್ನು ಹೊಂದಲಾರರು.

ಪಂಚವಿಧ ಪೌತ್ತಳೀಕರು

ಪ್ರಕೃತವಾದ ಶ್ರೇಯಃಲಾಭಾರ್ಥಿಗಳು ಶ್ರೀ ವಿಗ್ರಹಾರಾಧನೆ ಹಾಗೂ ಗೊಂಬೆಪೂಜೆಗಳೊಳಗೆ ಇರುವ ಪರಸ್ಪರ ಭೇದಗಳನ್ನು ಚೆನ್ನಾಗಿ ತಿಳಿದು, ಗೊಂಬೆಪೂಜೆಯನ್ನು ಪರಿತ್ಯಾಗ ಮಾಡಬೇಕು ಈ ಸಂದರ್ಭದಲ್ಲಿ ಶಾಸ್ತ್ರಗಳಲ್ಲಿ ಗರ್ಹಿತವಾಗಿರುವ ಪೌತ್ತಳೀಕತೆಯನ್ನೂ, ಅವುಗಳನ್ನು ಅಭ್ಯಸಿಸುವರ ಕುರಿತಾಗಿಯೂ ಕಿಂಚಿತ್ತಾಗಿ ವಿಚಾರಿಸಲಾಗಲಿ. ಭಗವಂತನ ಸ್ವರೂಪಕ್ಕೆ ನೇರವಾಗಿ ಸಂಬಂಧಿಸ ದಿರುವ ವಸ್ತುಗಳನ್ನೂ, ವಿಷಯಗಳನ್ನೂ ದೇವ ರೆಂದು ಪೂಜಿಸುವವರೇ ಪೌತ್ತಳೀಕರಾಗಿದ್ದು ಮುಖ್ಯವಾಗಿ ಇವರೆಲ್ಲರೂ ಈ ಕೆಳಗಿನಂತೆ ಐದು ವಿಧವಾದವರು,

೧) ವಾಸ್ತವ ವಸ್ತುವಿನ ತತ್ತ್ವದಲ್ಲಿ ಅಜ್ಞ ರಾಗಿದ್ದು ಜಡವಸ್ತುಗಳನ್ನು ಈಶ್ವರನೆಂದು ತಿಳಿದು ಪೂಜಿಸುವವರು

೨) ಜಡವಸ್ತುಗಳೆಲ್ಲವನ್ನು ತುಚ್ಛವಾದು ದೆಂದು ತಿಳಿದು ಜಡ–ವಿಪರೀತವಾದ ಕಲ್ಪಿತಭಾವ ಗಳನ್ನು ಈಶ್ವರನೆಂದು ಪೂಜಿಸುವವರು

೩) ಈಶ್ವರನಿಗೆ ಸ್ವರೂಪವಿಲ್ಲವೆಂದು ನಿಶ್ಚಯ ಮಾಡಿಕೊಂಡಿದ್ದು, ಯಾವುದಾದರೊಂದು ಸ್ವರೂಪದ ಹೊರತಾಗಿ ಧ್ಯಾನದ ಅಥವಾ ವಿಚಾರದ ವಸ್ತುವು ಪ್ರಾಪ್ತವಾಗದುದರಿಂದ ಉಪಾಸನೆಯ ಅನುಕೂಲತೆಗಾಗಿ ಈಶ್ವರನ ಜಡ ರೂಪಗಳನ್ನು ಕಲ್ಪಿಸುವವರು.

೪) ಚಿತ್ತವೃತ್ತಿಯ ಶುದ್ಧತೆ ಹಾಗೂ ಉನ್ನತಿಯ ಸಲುವಾಗಿ ಈಶ್ವರನನ್ನು ಕಲ್ಪಿಸಿ, ಆತನ ಕಲ್ಪಿತ ಮೂರ್ತಿಗಳ ಧ್ಯಾನವನ್ನು ಮಾಡು ವವರು.

೫) ಜೀವಮಾತ್ರರಾದವರನ್ನು ಈಶ್ವರ ನೆಂದು ತಿಳಿದು ಪೂಜಿಸುವವರು.

ಅಸಭ್ಯರಾದವನ್ಯಮಾನವರೂ, ಅಗ್ನಿ ಪೂಜಕರೂ, ಗ್ರೀಕದೇಶೀಯ ಗ್ರಹಪೂಜಕರೂ, ಪ್ರಥಮಶ್ರೇಣಿಯ ಪೌತ್ತಳೀಕರು. ಈಶ್ವರನ ಸ್ವರೂಪಜ್ಞಾನವು ಉದಯಿಸುವ ಪೂರ್ವದಲ್ಲಿ ಸ್ವಾಭಾವಿಕವಾದ ವಿಶ್ವಾಸದಿಂದ ಅಜ್ಞತೆಯ ಫಲ ವಾಗಿ ಜಗತ್ತಿನಲ್ಲಿ ಮನಸೆಳೆಯುವಂತಹ ಬೃಹ ದ್ವಸ್ತುಗಳನ್ನು ಪೂಜಿಸುವವರ ಪೂಜೆಯ ಹೇಯ ವಾದುದಾದರೂ ಇವರು ಅತ್ಯಂತವಾದ ನಿಮ್ನಾಧಿ ಕಾರಿಗಳಾಗಿರುವುದರಿಂದ ಅಧಿಕಾರ ವಿಚಾರ ದಲ್ಲಿ ಇದನ್ನು ನಿಂದಿಸಲಾಗುವುದಿಲ್ಲ. ನಿರಾಕಾರ ವಾದಿಗಳು ದ್ವಿತೀಯ ಶ್ರೇಣಿಯ ಪೌತ್ತಳೀಕರು. ಇವರು ಜಡೀಯಜ್ಞಾನದ ಅತ್ಯಂತ ಆಲೋ

( 35ನೇ ಪುಟ ನೋಡಿ )

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ನಿತ್ಯಕುಂಕುಮಾರ್ಚನೆಯ ಶುಲ್ಕವನ್ನು ರೂ 150–00 ಗಳಿಗೆ ನಿಗಧಿ ಗೊಳಿಸಲಾಗಿದೆ, ಈ ಹೊಸ ಶುಲ್ಕ ಪದ್ಧತಿ ಈ ಕೂಡಲೇ ಜಾರಿಗೆ ಬಂದಿದ್ದು ಈ ಹಿಂದೆಯೇ ನಿತ್ಯಕುಂಕುಮಾರ್ಚನೆಯನ್ನು ಮಾಡಿಸಲು ಶುಲ್ಕ ಪಾವತಿ ಮಾಡಿರುವ ಗೃಹಸ್ಥರ ಕೈಂಕರ್ಯವನ್ನು ಹಿಂದಿನಂತೆಯೇ ಮುಂದುವರಿಸ ಲಾಗುವುದು. ಆಸಕ್ತ ಭಕ್ತರು ವಿವರಗಳಿಗೆ ಸ್ಥಳೀಯ ಪೇಷ್ಕಾರ್ ಅವ ರನ್ನು ವಿಚಾರಿಸಬಹುದು.

**ಪೇಷ್ಕಾರ್**

**ಹರಿದಾಸ ವಾಣಿ**

# ಮಹಿಪತಿದಾಸರು



ದಾಸ ಸಾಹಿತ್ಯ ಶ್ರೀಮದ್ ಮಧ್ವಾಚಾರ್ಯರ ದ್ವೈತ ತತ್ತ್ವವನ್ನು ಅನುಸರಿಸಿಕೊಂಡು 'ದಾಸೋಹಂ' ಎಂಬ ಅಭಿದಾನದಿಂದ ದಕ್ಷಿಣ ಭಾರತದಲ್ಲಿ, ವಿಶೇಷವಾಗಿ ಕರ್ನಾಟಕದಲ್ಲಿ ಪ್ರಚಾರಕ್ಕೆ ಬರುವಂತಾಯಿತು ಇದೇ ಸಮಯದಲ್ಲಿ ನಮ್ಮ ನೆರೆ ನಾಡಾದ ಮಹಾರಾಷ್ಟ್ರದಲ್ಲಿ ನಾಥಸಂಪ್ರದಾಯವು ಬೆಳೆದು ಬಂದಿದ್ದರೆ, ಆಂಧ್ರ ಭಾಗದಲ್ಲಿ ತಾಳ್ಲಪಾಕಂ ಮನೆತನದವರು ಅನೇಕ ರೀತಿಯ ಭಕ್ತಿಗೀತೆಗಳನ್ನು ರಚಿಸಿದರು. ತಮಿಳುನಾಡಿನಲ್ಲಿ ಆಳ್ವಾರರು ಪ್ರಾದೇಶಿಕ ಭಾಷೆಯಲ್ಲಿ ಅನೇಕ ಪ್ರಬಂಧಗಳನ್ನು ರಚಿಸಿ, ಜನಸಾಮಾನ್ಯರಲ್ಲಿ ಭಕ್ತಿ ಪಂಥವು ಬೆಳೆಯುವಂತೆ ಮಾಡಿದರು. ಹೀಗೆಯೇ ಇಡೀ ದಕ್ಷಿಣಾಪಥದಲ್ಲಿ ತಮ್ಮ ಪ್ರಾದೇಶಿಕ ಭಾಷೆಗಳನ್ನು ಬಳಸಿಕೊಂಡು ಸಂಸ್ಕೃತದಲ್ಲಿ ಅಪಾರವಾಗಿ ಹೊಮ್ಮಿಕೊಂಡಿದ್ದ ಭಕ್ತಿ ಪ್ರಧಾನವಾದ ಸಾಹಿತ್ಯವನ್ನು ಪ್ರಾಂತೀಯ ಭಾಷೆಗಳಿಗೆ ಅಳವಡಿಸಿಕೊಂಡು ಅನೇಕ ಗೀತೆಗಳನ್ನು ರಚಿಸಲಾಯಿತು.

ಕರ್ನಾಟಕ ಹರಿದಾಸಪಂಥವು ನರಹರಿ ತೀರ್ಥರಿಂದ ಪ್ರಾರಂಭಗೊಂಡು ಶ್ರೀಪಾದರಾಜರಿಂದ ಪೋಷಿತವಾಗಿ ವ್ಯಾಸರಾಯರಿಂದ ಅನೇಕ ಮುಖಗಳ ಹರವನ್ನು ಕಾಣುವಂತಾಯಿತು. ಮರೆಯಲಾಗದ ಮಹಾ ಸಾಮ್ರಾಜ್ಯವೆಂದು ಕರೆಸಿಕೊಂಡ ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ಈ ಸಾಹಿತ್ಯಕ್ಕೆ ವಿಶೇಷ ರೀತಿಯ ಬೆಂಬಲವೂ ಪ್ರೋತ್ಸಾಹವೂ ದೊರೆತುದು ವಿಶೇಷದ ಸಂಗತಿ. ಅಂದು ವ್ಯಾಸರಾಯರ ಶಿಷ್ಯರಾದ ಪುರಂದರದಾಸರು, ಕನಕದಾಸರು, ವಾದಿರಾಜರು ಇವರೇ ಮೊದಲಾದವರಿಂದ ಈ ಭಕ್ತಿ ಪಂಥವು ನಾಡಿನ ತುಂಬೆಲ್ಲ ಮನೆ ಮನೆಗೂ, ಮನಮನಕ್ಕೂ ಮುಟ್ಟುವ ರೀತಿಯಲ್ಲಿ ಲಕ್ಷೋಪಲಕ್ಷ ರೂಪದಲ್ಲಿ ಅನುಭವಜನ್ಯವಾದ ಸಾಹಿತ್ಯವು ಹೊರ ಬರುವಂತಾಯಿತು.

ಹೀಗೆ ವಿಪುಲವಾಗಿ ಬೆಳೆದ ಈ ಸಾಹಿತ್ಯವು ಆ ಸಾಮ್ರಾಜ್ಯದ ವಿಪತ್ತಿನೊಂದಿಗೆ ತಾನೂ ಮರೆಯಾಗಬೇಕಾದುದು ಕನ್ನಡ ನಾಡಿನ ಸಾಹಿತ್ಯಾಭ್ಯಾಸದ ದೃಷ್ಟಿಯಿಂದ ಬಹು ವಿಷಾದನೀಯ ಸಂಗತಿ. ವಿಜಯನಗರದ ಪತನಾನಂತರ ಪುರಂದರ ದಾಸರಿಂದ ರಚಿತವಾದ ಪದಪದ್ಯಗಳ ಕಟ್ಟು ಹೇಗೆ ಮಾಯವಾಯಿತೋ ? ಯಾವ ರೀತಿಯಲ್ಲಿ ನಶಿಸಿಹೋಯಿತೋ ? ಎಂಬ ಮಾತು ಇಂದಿಗೂ ನಿಗೂಢವಾಗಿರುವುದು. ಅಂದು ಸುದೈವದಿಂದ ಜನರ ಹೃದಯದಲ್ಲಿ ಅಚ್ಚಳಿಯದೆ ಮೂಡಿದ ಭಾವ ಗೀತೆಗಳು ಕಾಲಾಂತರದಲ್ಲಿ ಅನೇಕರಿಂದ ಅನೇಕ ಬಗೆಯಾಗಿ ದೊರೆಯಲ್ಪಟ್ಟು, ಪರಿಶ್ರಮ ಸಂಗ್ರಹಣೆಯಿಂದಾಗಿ ಪುರಂದರ ದಾಸರ ಸಾಹಿತ್ಯದ ಹೊತ್ತಿಗೆಗಳನ್ನು ಇಂದು ನಾವು ಕಾಣುವಂತಾಗಿದೆ

ವಿಜಯನಗರ ಪತನಾನಂತರ ಈ ದಾಸ ಸಾಹಿತ್ಯದ ಪ್ರವಾಹವನ್ನು ರಕ್ಷಿಸಿಕೊಂಡು ಬಂದ ಕೀರ್ತಿ ಬಿಜಾಪುರದ ಆದಿಲ್‌ಷಾಹಿ ಸಾಮ್ರಾಜ್ಯಕ್ಕೆ ಸಲ್ಲುತ್ತದೆ ಏಕೆಂದರೆ ಪುರಂದರದಾಸರು ಕಾಲವಾದ ನಂತರ ಸುಮಾರು ವರ್ಷಗಳ ಮೇಲೆ ವಿಜಯದಾಸರು ಜನ್ಮತಾಳಿದರು. ಈ ವಿಜಯದಾಸರಿಂದ ಮುಂದೆ ಹರಿದಾಸಪಂಥದ ಪ್ರವಾಹವು ಓತಪ್ರೋತವಾಗಿ ಹರಿದುದನ್ನು ಜನಸಾಮಾನ್ಯರು ಅರ್ಥಮಾಡಿಕೊಂಡಿದ್ದಾರೆ. ಪುರಂದರದಾಸರು ಹಾಗೂ ವಿಜಯದಾಸರು ಇವರ ಕಾಲಾವಧಿಯ ಮಧ್ಯದಲ್ಲಿ ಕನ್ನಡ ದಾಸ ಸಾಹಿತ್ಯವನ್ನು ರಕ್ಷಿಸಿಕೊಂಡು ಬಂದ ಮಹಿಪತಿರಾಯರ ಕೃತಿಗಳನ್ನು ಕುರಿತು ಅಭ್ಯಾಸ ಮಾಡಬೇಕಾದುದು ಕನ್ನಡಿಗರ ಆದ್ಯಕರ್ತವ್ಯವೆನಿಸುತ್ತದೆ.

ವಿಜಯನಗರದ ಪತನಾನಂತರ ಹಿಂದೂ ಸಂಸ್ಕೃತಿ, ಹಿಂದೂ ಸಾಹಿತ್ಯ ಇವುಗಳಿಗೆ ಯಾವ ಸ್ಥಾನಮಾನಗಳೂ ಇಲ್ಲದಂತಹ ಪರಿಸ್ಥಿತಿಯೊದಗಿದಾಗ ಆದಿಲ್‌ಷಾಹಿ ಮನೆತನದವರು ತಾವು ಸ್ವತಃ ಅನೇಕ ಭಕ್ತಿಗೀತೆಗಳನ್ನು ಪಾರ್ಶಿ ಭಾಷೆಯಲ್ಲಿ ರಚಿಸಿದರಲ್ಲದೆ ಹಿಂದೂ ದೇವತೆಗಳಾದ ಸರಸ್ವತಿ, ನರಸಿಂಹ, ಗಣಪತಿ ಹಾಗೂ ಮಹದೇವನನ್ನು ಸ್ತುತಿಸಿರುವ ಇಬ್ರಾಹಿಂ ಆದಿಲ್‌ಷಹನಿಂದ ರಚಿತವಾದ ಇಬ್ರಾಹಿಂನಾಮಾ ಗ್ರಂಥವು ಅತ್ಯಮೂಲ್ಯವಾದ ಸಂಗೀತ ಸಾಹಿತ್ಯವೆನಿಸಿಕೊಳ್ಳುತ್ತದೆ.

ಮಹಿಪತಿರಾಯರು 1611ರಲ್ಲಿ ಜನಿಸಿದರು, ಇವರು ಹುಟ್ಟಿದ 20 ವರುಷಗಳ ಮೇಲೆ ಶಿವಾಜಿ ಜನ್ಮತಾಳಿದ. ರಾಯರು ಮೂಲತಃ ಕಾಥವಟೆ ಮನೆತನದವರು ಇವರ ತಾತನ ಹೆಸರು ರಂಗಭಟ್ಟ. ತಂದೆಯ ಹೆಸರು ಕೋನೇರಿ ರಾಯ. ನಮಗೆ ತಿಳಿದಂತೆ ಮನೆತನದವರು ಮೊಟ್ಟಮೊದಲು ಭಾಗವತ ಸಂಪ್ರದಾಯದವರಿರಬಹುದೆಂದು ಭಾಸವಾಗುತ್ತದೆ. ರಾಯರು ನರಸಿಂಹ ಭಾರತೀ ದೇವಮಂದಿರದಲ್ಲಿ ಪುರಾಣ ಹೇಳುತ್ತಿದ್ದ ಕಾಲದಲ್ಲಿ ಅಂದಿನ ಪ್ರಧಾನ ಸಚಿವರ ಮಗನಾದ ಖವಾಸ್ ಖಾನನ ಗಮನಕ್ಕೆ ಇವರು ಮೊಟ್ಟಮೊದಲು ಬರುವಂತಾದರೆಂದು ಅವರ ಜೀವನದ ಅಭ್ಯಾಸದಿಂದ ತಿಳಿದುಬರುತ್ತದೆ.

ವಿಜಾಪುರದ ಕೋಟೆಯ ಸಮೀಪದಲ್ಲಿರುವ ನರಸಿಂಹದೇವಾಲಯವು ದ್ವಾದಶ ರೂಪಗಳಲ್ಲೊಂದಾದ ನರಸಿಂಹನ ದೇವಾಲಯವಲ್ಲ. ಅದು ನರಸಿಂಹ ಭಾರತಿಗಳ ಪಾದುಕೆಗಳಿರುವ ಸನ್ನಿಧಾನದಿಂದ ಕೂಡಿದ ಒಂದು ಮಂದಿರ. ಅಲ್ಲಿ ಇವರು ಪುರಾಣ ಹೇಳುತ್ತಿದ್ದರೆಂಬುದು ಜನಜನಿತ. ಅಂದು ಇವರು ಹೇಳುತ್ತಿದ್ದ ಪುರಾಣ ಅಂದಿನ ಕಾಲದಲ್ಲಿ ಅತ್ಯಂತ ಪ್ರಚಲಿತವಾಗಿದ್ದ ಸಂತ ಏಕನಾಥ ಭಾಗವತ ಆಗಿರಬೇಕು ಎಂದು ಊಹಿಸಲು ಸಾಧ್ಯತೆಗಳಿವೆ. ನಾನು ಚಿಕ್ಕವನಿರುವಾಗ ಈ ಮಂದಿರದಲ್ಲಿ 'ಧನ್ಯಧನ್ಯವೋ ಪ್ರದಕ್ಷಿಣ ಮದ್ಗುರುರಾಯಾಜಿ' ಎಂದು ಪಲ್ಲಕ್ಕಿ ಸೇವೆಯಲ್ಲಿ ಹಾಡುತ್ತಿದ್ದುದನ್ನು ಕೇಳಿದ್ದೇನೆ.

ವಿಜಾಪುರವನ್ನಾಳಿದ ಮಹಮದೀಯರು ತಮ್ಮ ರಾಜ್ಯದ ಆಡಳಿತ ಭಾಷೆಯನ್ನಾಗಿ ಮೋಡಿಲಿಪಿ ಹಾಗೂ ಮರಾಠಿಭಾಷೆಯನ್ನು ಹೆಚ್ಚಾಗಿ ಬಳ

**ಶ್ರೀ ಆದ್ಯ ರಾಮಾಚಾರ್ಯ**

ಸುತ್ತಿದ್ದರೆಂಬುದು ಅಂದಿನ ಕಾಲದ ದಾಖಲೆಗಳನ್ನು ಅಭ್ಯಾಸ ಮಾಡಿದಲ್ಲಿ ತಿಳಿದುಬರುತ್ತದೆ. ರಾಯರಿಗೆ ಕನ್ನಡ, ಉರ್ದು, ಪಾರ್ಸಿ ಹಾಗೂ ಮರಾಠೀ, ಸಂಸ್ಕೃತ ಭಾಷೆಗಳಲ್ಲಿ ಒಳ್ಳೆಯ ಪ್ರಭುತ್ವ ವಿತ್ತೆಂಬುದು ಅವರ ಜೀವನದ ಅಭ್ಯಾಸದಿಂದ ತಿಳಿದುಬರುವುದು. ರಾಯರು 1634ರಲ್ಲಿ ಮೊದಲು ಖವಾಸ್ ಖಾನನ ಸೇವೆಯನ್ನು ಅಂಗೀಕರಿಸಿದರು. ನಂತರ 35ರಿಂದ '5ರ ವರೆಗೆ ಅಂದರೆ 20 ವರ್ಷಗಳ ಕಾಲ ಸಾಮ್ರಾಜ್ಯದ ಖಜಾಂಚಿಗಳಾಗಿ ಹಾಗೂ ಒಳ್ಳೆ ತಜ್ಞ ಎಂಜಿನಿಯರರಾಗಿ ಸೇವೆ ಸಲ್ಲಿಸಿದರು ಈ ಇಪ್ಪತ್ತು ವರ್ಷಗಳ ಕಾಲಾವಧಿಯಲ್ಲಿ ರಾಜಧಾನಿಯಾದ ವಿಜಾಪುರ ನಗರವನ್ನು ಸರ್ವಾಂಗ ಸುಂದರವಾಗಿ ಬೆಳೆಸಿದ ಕೀರ್ತಿಗೆ ಕಾರಣರಾದವರೆಂದರೆ ಮಹಿಪತಿ ರಾಯರು. ಬಾದಷಹನ ಅಪ್ಪಣೆಯಂತೆ ಬಹು ಎತ್ತರದ ಸ್ಥಳ ಹುಡುಕಿ 'ಬೇಗಂ ತಾಲಾಬ್' ಎಂಬ ಕೆರೆಯನ್ನು ಕಟ್ಟಿಸಿ, ಆ ಕೆರೆಯ ನೀರು ವಿಜಾಪುರದ ತುಂಬೆಲ್ಲ ಹರಿದು ಉದ್ಯಾನವನಗಳಲ್ಲಿ ಮುಗಿಲೆತ್ತರಕ್ಕೆ ತಾನೇತಾನಾಗಿ ಕಾರಂಜಿಗಳ ರೂಪದಲ್ಲಿ ಹಾರುವಂತೆ ಮಾಡಿದರು ಮಹಿಪತಿ ರಾಯರು. ಅವರ ಈ ಸಾಹಸ ಆಗ್ರಾದ ಹಾಗೂ ದಿಲ್ಲಿಯ ಕೆಂಪು ಕೋಟೆಗಳಲ್ಲಿ ತೋರುವ ವೈಭವವನ್ನು ಮೀರಿಸುವಂತೆ ಮಾಡಿತು.

ರಾಯರ ಕಾಲದಲ್ಲಿ ಆದಿಲ್ ಷಾಹಿ ಸಾಮ್ರಾಜ್ಯದ ವೈಭವವು ಉತ್ತುಂಗ ಶಿಖರವನ್ನು ಮುಟ್ಟಿತೆಂಬ ಒಗ್ಗೆ ಇಂದು ಅವರ ಕಾಲದಲ್ಲಿ ರಚಿತವಾಗಿ ಉಳಿದುಳಿದುಕೊಂಡು ಬಂದಿರುವ ಸ್ಮಾರಕಗಳೇ ಸಾಕ್ಷಿಯಾಗಿ ನಿಂತಿವೆ.

ಮತಾಂಧನಾದ ಔರಂಗಜೇಬನು ದಕ್ಷಿಣಾ ಪಥಕ್ಕೆ ಸರ್ ಸುಬೇದಾರನೆಂದು ನಿಯುಕ್ತನಾಗಿ ಔರಂಗಾಬಾದಿಗೆ ಬಂದಾಗ ಮಹಾನುಭಾವರಾದ ಹಾಗೂ ಸೂಫಿ ಪಂಥಾನುಯಾಯಿಗಳಾದ ಶಾನುಂಗರು ಮುಂದಾಗಬಹುದಾದ ಭವಿಷ್ಯತ್ತನ್ನು ತಮ್ಮ ದೂರದೃಷ್ಟಿಯಿಂದ ಅರಿತುಕೊಂಡು ಚಿಂತಿಸಿ ಆಕಸ್ಮಿಕವಾಗಿ ಮಹಿಪತಿರಾಯರನ್ನು ಅಡ್ಡಗಟ್ಟಿ ಅವರ ಅಂತರಾತ್ಮವನ್ನು ಪರೀಕ್ಷಿಸಿ ನೋಡಿ (ವಹೌತ್ ಕಾಫಾನ್) ದುರ್ಸಾತ ಎಂದು ಹೇಳಿ ಅದೃಶ್ಯರಾದಾಗ ರಾಯರ ಜೀವನದ ಹೊಸದೊಂದು ಭಾಗವು ಪ್ರಾರಂಭವಾಗುತ್ತದೆ ಅವರು ಬಾದಶಹರನ್ನು ಕಂಡು ತಮ್ಮ ಸಾಧನೆಗಾಗಿ ಅವರಿಂದ ಅಪ್ಪಣೆಯನ್ನು ಪಡೆದು 1655 ರಿಂದ 81ರ ವರೆಗೆ ಕಾಖಂಡಕೀ ಗ್ರಾಮದಲ್ಲಿ ಬಂದು ವಾಸಮಾಡಬಯಸುತ್ತಾರೆ ಈ ಕಾಲಾವಧಿಯಲ್ಲಿ ಅವರಿಗೆ ಭಾಸ್ಕರ ಸ್ವಾಮಿಗಳ ಸಹವಾಸವು ಪ್ರಾಪ್ತವಾಗುತ್ತದೆ. ಅಂದು ನಮ್ಮ ನಾಡಿನ ಪರಿಸರದಲ್ಲೆಲ್ಲಾ ಸಮರ್ಥ ರಾಮದಾಸರ ಪ್ರಭಾವವು ಸಾಕಷ್ಟು ಪ್ರಚಾರದಲ್ಲಿತ್ತು. ಮಹಾಮಹಿಮರಾದ ರುಕ್ಮಿಣಿ ಪಂಡಿತರು 1610 ರಿಂದ 1710ರ ವರೆಗೆ ಅಂದರೆ 100 ವರ್ಷಗಳ ಕಾಲ ಬಾಳಿದವರು. ಈ ರಾಜ್ಯದಲ್ಲಿಯೇ ಬಾಳಿದರು.

ಇದೇ ಕಾಲದಲ್ಲಿ ಅಗರಖೇಡದ ದ್ವೈಪಾಯನಾಚಾರ್ಯರು, ಸಿಂಧಗಿಯ ಜಕ್ಕಪ್ಪಯ್ಯನವರು ಈ ನಾಡಿನಲ್ಲಿ ಆಗಿಹೋದರೆಂದು ತಿಳಿದುಬರುವುದು. ರಾಯರು ಕಾಖಂಡಕೀ ಗ್ರಾಮಕ್ಕೆ ಬಂದನಂತರ ಸುಮಾರು ಎಂಟು ವರ್ಷಗಳ ಮೇಲೆ ಅಂದರೆ 1663ರಲ್ಲಿ ಅವರಿಗೆ ಮೊದಲ ಸಂತಾನವಾಯಿತೆಂದು ತಿಳಿದುಬರುವುದು

ರಾಯರು ಸರಕಾರಿ ಚಾಕರಿಯಲ್ಲಿದ್ದಾಗ 1663ರಲ್ಲಿ ಗೋಲ್ಕೊಂಡದವರೊಡಿಗೆ ಒಪ್ಪಂದವಾಗುವಂತೆ ನೋಡಿಕೊಂಡರು ಮುಂದೆ ಕೇವಲ ಹತ್ತು ವರ್ಷಗಳಲ್ಲಿ ಶಿವಾಜಿ ತೋರಣಗಢವನ್ನು ಸ್ವಾಧೀನಪಡಿಸಿಕೊಂಡನು. ಎಲ್ಲಿಯವರೆಗೆ ಜಾವಳಿ ಪ್ರಾಂತ್ಯವು ಆದಿಲ್‌ಷಹರ ಕೈಯಲ್ಲಿತ್ತೋ, ಅಲ್ಲಿಯವರೆಗೆ ಶಿವಾಜಿಯ ಯಾವುದೇ ತರಹದ ಚಟುವಟಿಕೆಗಳ ಬಗ್ಗೆ ವಿಜಾಪುರದವರು ಅಷ್ಟೊಂದು ಗಮನಿಸಿದಂತೆ ತೋರಿಬರುವುದಿಲ್ಲ. 1656ರಲ್ಲಿ ಜನವರಿ ತಿಂಗಳು ಜಾವಳಿ ಪ್ರಾಂತ್ಯ ಕೈಬಿಟ್ಟುಹೋದಮೇಲೆ ಇಡೀ ಕೊಂಡಣಾಪಥವು ಆದಿಲ್‌ಷಾಹಿ ಸಾಮ್ರಾಜ್ಯದಿಂದ ಕೈಬಿಟ್ಟು ಹೋಗುವ ಭೀತಿಯು ಪ್ರಾರಂಭವಾಯಿತು.

ರಾಯರು ಸರ್ವಸಂಗ ಪರಿತ್ಯಾಗ ಮಾಡಿ ಏಕಾಂತವಾಸಿಗಳಾಗಿ ಯೋಗಾಭ್ಯಾಸ ನಿರತರಾದುದು ದಾಸ ಸಾಹಿತ್ಯದಲ್ಲಿಯೇ ವಿಶೇಷದ ಸಂಗತಿ ಎಂದೆನಿಸಿಕೊಳ್ಳುವುದು. ದಾಸ ಸಾಹಿತ್ಯದಲ್ಲಿ ಯೋಗಾಭ್ಯಾಸಕ್ಕೆ ಅತ್ಯಂತ ಮಹತ್ವದ ಸ್ಥಾನವನ್ನಿತ್ತವರಲ್ಲಿ ಮಹಿಪತಿರಾಯರೇ ಮೊಟ್ಟಮೊದಲಿಗರೆಂಬ ಮಾತನ್ನು ನಾವು ಒಪ್ಪಿಕೊಳ್ಳಲೇಬೇಕಾಗುವುದು.

ಪುರಂದರದಾಸರ ನಂತರ ಆ ಸಾಹಿತ್ಯದ ಪ್ರವಾಹವನ್ನು ರಕ್ಷಿಸಿಕೊಂಡು ಬಂದವರಲ್ಲಿ ಹಿರಿಯರಾದ ಮಹಿಪತಿರಾಯರು. ಅಲ್ಲದೆ ಪುರಂದರದಾಸರಿಗೆ ದೊರೆತಂತೆ ರಾಜಾಶ್ರಯವನ್ನು ಹೊಂದಿದ ದಾಸರೆಂದರೆ ಮಹಿಪತಿ ದಾಸರೊಬ್ಬರೇ ವಿನಃ ಇನ್ನೊಬ್ಬರಿಲ್ಲ. ಇನ್ನುಳಿದ ದಾಸರಂತೆ ಪುರಂದರ ವಿಠಲ ಅಥವಾ ವಿಠಲ ಎಂಬ ಅಂಕಿತವನ್ನಿಟ್ಟುಕೊಳ್ಳದೆ ಅವರು ಮಹಿಪತಿ, ದಾಸ ಮಹಿಪತಿ, ಚಿಣ್ಣ ಮಹಿಪತಿ, ಕಂದ ಮಹಿಪತಿ, ಮೂಢ ಮಹಿಪತಿ ಎಂಬ ಹೆಸರಿನಿಂದ ಪದಪದ್ಯಗಳನ್ನು ರಚಿಸಿದರು. ಇದೇ ರೀತಿಯಾಗಿ ವಿಜಾಪುರ ಜಿಲ್ಲೆಯವರಾದ ಹಾಗೂ ಪೂರ್ವದಲ್ಲಿ ಕಾಖಂಡಕೀ ಗ್ರಾಮದವರಾದ ಮತ್ತು ವಿಜಯದಾಸರ ಸಮಕಾಲೀನರಾದ ಪ್ರಸನ್ನ ವೆಂಕಟದಾಸರೂ ಕೂಡ ವಿಠಲ ಪದವನ್ನು ಅಂಕಿತವಾಗಿಟ್ಟುಕೊಳ್ಳದೆ ಪ್ರಸನ್ನ ವೆಂಕಟ ಎಂಬ ಅಂಕಿತದಿಂದಲೇ ಪದಪದ್ಯಗಳನ್ನು ಬರೆದಿರುವುದರಿಂದ ವಿಜಾಪುರ ಜಿಲ್ಲೆಯು

ದಾಸ ಸಾಹಿತ್ಯಕ್ಕೆ ಕೊಟ್ಟ ಒಂದು ವಿಶೇಷದ ಕೊಡುಗೆಯಾಗಿ ಮಹಿಪತಿರಾಯರು ಹಾಗೂ ಪ್ರಸನ್ನ ವೆಂಕಟದಾಸರನ್ನು ನಾವು ಕಾಣ ವಂತಾದೆವು

ಭಾಗವತ ಪಂಥದ ಪ್ರಭಾವ ಇಲ್ಲವೆ ರಾಮ ದಾಸ ಪಂಥೀಯರ ಪ್ರಭಾವ, ಅಥವಾ ಸೂಫೀ ಪಂಥದ ಪ್ರಭಾವದಿಂದಾಗಿ ಮಹಿಪತಿರಾಯರು ರಚಿಸಿದ ಮೊದಲನೆಯ ಕೆಲವು ಕೃತಿಗಳಲ್ಲಿ ಅವರು ತಮಗೆ ಮಾರ್ಗದರ್ಶಕರಾದ ಭಾಸ್ಕರ ಸ್ವಾಮಿಗಳ ಗುರುಕಾರುಣ್ಯವನ್ನು ಕುರಿತು ಬಾಯ್ತುಂಬ ಹೊಗಳಿರುವುದುಂಟು. ಹಾಗೆಯೇ ಅವರ ಮೇಲೆ ದತ್ತನ ಪ್ರಭಾವವೂ ವಿಶೇಷವಾಗಿದ್ದುದು ಕಂಡುಬರುವುದು. ಹೀಗಿದ್ದರೂ ಸಹ ಮುಂದೆ ಅವರ ಕುಲಗುರುಗಳಾದ ಪ್ರಹ್ಲಾದ ಕೃಷ್ಣಾ ಚಾರ್ಯರ ಸಹವಾಸ, ಉಪದೇಶಗಳು ಬೆಳೆ ದಂತೆಲ್ಲಾ ರಾಯರ ಮನಸ್ಸು ಸಂಪೂರ್ಣವಾಗಿ ದ್ವೈತತತ್ತ್ವದತ್ತ ಹೊರಳಿದುದು ಸ್ಪಷ್ಟವಾಗಿ ಕಂಡುಬರುವುದು. ಶ್ರೀಯುತರ ಕೃತಿಗಳಲ್ಲಿ ಪ್ರಾದೇಶಿಕ ಭಾಷಾಗಾಂಭೀರ್ಯವು ಸಾಕಷ್ಟು ಪ್ರಮಾಣದಲ್ಲಿದೆ ಪ್ರಾಕೃತ ಶಬ್ದಗಳು ಸ್ವಚ್ಛಂದ ವಾಗಿ ತಾಳ ಲಯಬದ್ಧವಾಗಿ ಅವರ ಗೀತೆಗಳಲ್ಲಿ ಒಕ್ಕೂಡಿಕೊಂಡು ಬಂದಿವೆ. ಅವರು ರಚಿಸಿದ ಕೆಲ ಪದ್ಯಗಳಲ್ಲಿ ಮರಾಠೀ, ಕನ್ನಡ, ಉರ್ದು ಭಾಷೆ ಸಮ್ಮಿಶ್ರಗೊಂಡು ಮೈದಳೆದು ಬಂದಿವೆ ಇನ್ನು ಕೆಲವು ಉರ್ದು ಭಾಷೆಯಲ್ಲಿಯೇ ಪದ್ಯ ಗಳು ರಚಿತವಾಗಿವೆ. ಹೀಗೆ ಅವರ ಸಾಹಿತ್ಯ, ಸೃಷ್ಟಿ ಪರಿಸರದೊಂದಿಗೆ ಒಂದುಗೂಡಿಕೊಂಡು ಭಗವದನುಗ್ರಹದ ರೂಪವಾಗಿ ತಾನೇತಾನಾಗಿ ಹೊರಬಂದಿರುವುದು ವಿಶೇಷದ ಸಂಗತಿಯಾಗಿದೆ. ಶ್ರೀಯುತರ ಕಾಲದಲ್ಲಿ ಶ್ರೀಮದುತ್ತರಾದಿ ಮಠಕ್ಕೆ ಸತ್ಯನಾಥ ತೀರ್ಥರು ಮಠದ ಯತಿವರ್ಯರಾಗಿ ಇದ್ದರೆಂದೂ, ಅವರ ಕೊನೆಗಾಲದಲ್ಲಿ ಶ್ರೀ ಸತ್ಯ ಬೋಧರು ಬಂದಿರಬಹುದೆಂದೂ ಊಹಿಸಲು ಸಾಧ್ಯತೆಗಳಿವೆ. ರಾಯರು ಮಧ್ವಾಚಾರ್ಯರಿಂ ದಾರಂಭ ಮಾಡಿಕೊಂಡು ಪದ್ಮನಾಭತೀರ್ಥ, ನರಹರಿತೀರ್ಥ, ಮಾಧವತೀರ್ಥ, ಅಕ್ಷೋಭ್ಯ ತೀರ್ಥ ಇವರೇ ಮೊದಲಾದ ಯತಿವರೇಣ್ಯರ ಸ್ತೋತ್ರಗಳನ್ನು ಮಾಡಿದ್ದಾರಲ್ಲದೆ ಶ್ರೀಪಾದ ರಾಯರು, ವ್ಯಾಸರಾಯರು, ವಾದಿರಾಜರು, ಪುರಂದರದಾಸರು, ಕನಕದಾಸರು, ಮೊದಲಾದವ ರನ್ನು ಸಹ ಹೊಗಳಿದ್ದಾರಲ್ಲದೆ ತಾಳ್ಳಪಾಕಂ ಅನ್ನಮಾಚಾರ್ಯರನ್ನೂ ಸಹ ಸ್ಮರಿಸಿಕೊಂಡಿದ್ದಾರೆ. ಆದ್ಯ ಮನೆತನದ ಹಿರಿಯರನ್ನು ಬಾಯ್ತುಂಬ ಕೊಂಡಾಡಿದ್ದಾರೆ.

ಹರಿರೇವಪರೋ ಹರಿರೇವ ಗುರೋ
ಹರಿಯೇ ಗುರುವಿಂದ್ರರವಿ ಹರರೋ

— ಎಂದು ಹೇಳಿದ ರಾಯರೇ "ಹರಿ ಹರಿ ಎಂದು ನೆನೆಯೋ ಮನುಜಾ ಮರೆಯದೇ" ಎಂದು ಎಚ್ಚರಿ ಸಿರುವುದೂ ಉಂಟು. 'ಹರಿಭಕ್ತರ ಸಂಗ ಸ್ನಾನ ಗಂಗಾ ತುಂಗಾ, ಹರಿಮಹಿಮರ ಅಂಗ ಅಂತ ರಂಗ' ಎಂದು ಹೇಳಿದ ರಾಯರ ಕೀರ್ತನೆಗಳಲ್ಲಿ ಅನೇಕ ಅವತಾರಗಳ ವರ್ಣನೆ ಕಾಣಸಿಗುತ್ತವೆ. ಒಂದು ಸಂದರ್ಭದಲ್ಲಿ ಅವರು "ಸ್ವಾನಂದ ಸುಖ ಏನೆಂದು ಹೇಳಲಿ ಕೌತುಕ, ಒಡೆದು ಹೇಳುವುದಿಲ್ಲ, ಹಿಡಿದು ತಾ ಕೊಡಲಿಕ್ಕಿಲ್ಲ, ಪಡೆದುಕೊಂಡವನ ಬಲ್ಲ, ಗೂಡಿದನಲ್ಲ" ಎಂದು ಅಧ್ಯಾತ್ಮದ ನಿಗೂಢತೆಯನ್ನು ತತ್ತ್ವರೂಪದಲ್ಲಿ ಎತ್ತಿತೋರಿ ಸಿದ್ದಾರೆ ಮತ್ತೊಂದೆಡೆಯಲ್ಲಿ "ಸೂರ್ಯಸಿಲ್ಲದೆ ಸೂರ್ಯ ಪ್ರಕಾಶ ತುಂಬ್ಯಾದ ಹೇಳಲೇನ ತುರೀ ಯಾವಸ್ಥೆಯೋಳ್ ಬೆರೆದು ಕೂಡಿದ ಜ್ಞಾನಿ ಬಲ್ಲ ಖೂನ" ಎಂದು ಭಗವದ್ರೂಪದ ಸಾಕ್ಷಾತ್ಕಾರದ ವರ್ಣನೆಯನ್ನು ಅತಿ ಸೂಕ್ಷ್ಮವಾಗಿ ಎತ್ತಿತೋರಿ ಸಿದ್ದಾರೆ

ಮಹಿಪತಿರಾಯರು ಕರ್ಮಾಚರಣೆಯನ್ನು ಎತ್ತಿ ಹೇಳಲು ಇಚ್ಛಿಸದಿದ್ದರೂ ಒಂದು ಪದ್ಯದಲ್ಲಿ "ಹುರುಳಿಲ್ಲದ ಕರ್ಮಾಚರಣೆಯೊಳು ಮರು ಳಾದರು ಜನರೆಲ್ಲ"— ಎಂದು ಹಾಡಿದ್ದಾರೆ. ಜ್ಞಾನಮಾರ್ಗ, ಯೋಗಮಾರ್ಗಗಳತ್ತ ಮನಸ್ಸನ್ನು ವಿಶೇಷವಾಗಿ ಹರಿಸಿದ್ದರಿಂದ ಇಂಥ ಅಮೂಲ್ಯವಾದ ಕೃತಿರಚನೆ ಅವರಿಂದ ಲಭ್ಯ ವಾಯಿತೆಂದು ಹೇಳಿದರೆ ತಪ್ಪಾಗಲಾರದು. ಅವರ ಪದ್ಯಗಳಲ್ಲಿ ಅಂದಿನ ಯುದ್ಧಸಾಮಗ್ರಿ ಗಳನ್ನೇ ಬಳಸಿ, ಅದನ್ನು ಆಧ್ಯಾತ್ಮ ಸರವಾಗಿ ಹಾಡಿದ ಒಂದು ಪದ್ಯವೂ ಇದೆ. "ಕಾಯದ ಕೋವಿಯನೆ ಮಾಡಿ, ಭಾವನೆಯ ಮದ್ದನೆ ತುಂಬಿ, ಸೋಹ್ಯ ಸೊನ್ನೆಂದು ರಂಜಕವನಿಕ್ಕಿ, ಲಯ ಲಕ್ಷವೆಂಬ ಗುಂಡಿನಲಿ ಭವಪಾಶವೆಂಬ ಗುರಿಯ ಕೆಡುಹಿದ ಗುರುನಾಥ"— ಇದು ನಿತ್ಯಜೀವನದ ಹೋರಾಟದಲ್ಲಿಯೂ ಆಧ್ಯಾತ್ಮದ ಗಹನತೆಯನ್ನು ತುಂಬಿದ ಮಾಹಿತಿ ಕೇವಲ ಮಹಿಪತಿರಾಯರಿಗೆ ಮಾತ್ರ ಸಲ್ಲುತ್ತದೆ.

ರಾಯರು ರಾಜಕೀಯ ಜಂಜಾಟವನ್ನು ದೂರ ತಳ್ಳಿ, ಕೆಲವು ದಿನಗಳ ಕಾಲ ಷಹಾಪೂರ್ ಗುಡ್ಡದ ಮೇಲಿರುವ ಅಂಜನೇಯನ ಬಳಿ ನಿಂತು ತಪಸ್ಸೈದರೆಂದು ಐತಿಹ್ಯವಿದೆ. ಅನೇಕ ಸಲ ಗುರು ಗಳನ್ನು ಹುಡುಕಿಕೊಂಡು ಕೃಷ್ಣಾತೀರದ ಕೊಲ್ಹಾರಕ್ಕೆ ಹೋಗಿ ಬರುತ್ತಿರುವುದೂ ಪದ್ಧತಿ ಯಾಗಿತ್ತು. ಶಿವಾಜಿಯು ಪನಾಳಕೋಟೆ ಯನ್ನು ಹಿಡಿದಾಗ ಮೌಕ್ತಿಕ ಮಣಿಯಂತಿದ್ದ ಆ ಕೋಟೆಯನ್ನು ಬಿಡಿಸಿಕೊಂಡು ಬರಲು ಅಫಜಲ್ ಖಾನನ ಮರಣಾನಂತರ ಬಲಾಢ್ಯನಾದ ಯಾವ ಸರದಾರನೂ ವಿಜಾಪುರದಲ್ಲಿ ಇಲ್ಲದಿರುವಾಗ ಬಡೀ ಬೇಗಂ ತನ್ನ ಆಪ್ತ ಸಚಿವನಾದ ಕಾಶೀನಾಥ ತಿಮ್ಮಾಜಿಪಂತರನ್ನು ವಿಚಾರ ವಿನಿಮಯಕ್ಕಾಗಿ ರಾಯರ ಸಲಹೆಯನ್ನು ಪಡೆದುಕೊಂಡ. ಬರಲು ಕಾಖಂಡಕೀ ಗ್ರಾಮಕ್ಕೆ ಕಳುಹಿಸಿಕೊಡುತ್ತಾಳೆ ರಾಜಕೀಯದಿಂದ ದೂರ ಉಳಿಯಲು ಪ್ರಯತ್ನಿ ಸಿದರೂ ಸಹ ಸಾಧ್ಯವಾಗದೆ 'ಜನನೀ ಜನ್ಮ ಭೂಮಿಶ್ಚ, ಸ್ವರ್ಗಾದಪಿ ಗರೀಯಸೀ' ಎಂಬ ಮಾತಿನಂತೆ ರಾಯರ ಮನಸ್ಸು ಕರಗಿ ಮಹಾ ಬಲಾಢ್ಯನಾದ ಸಿದ್ದಿ ಜೋಹಾರನನ್ನು ಕರೆತಂದಲ್ಲಿ ಶಿವಾಜಿಯ ಉಪಟಳವು ನಿಲ್ಲುವಂತಾಗಬಹು ದೆಂಬ ಸೂಚನೆಯನ್ನು ನೀಡುತ್ತಾರೆ. ಅವರ ಈ ಸಲಹೆಯನ್ನು ಮಹಾರಾಣಿ ಒಪ್ಪಿಕೊಳ್ಳು ತ್ತಾಳೆ. ಈ ಕೆಲಸದಲ್ಲಿ ನಿರತರಾದ ಹಾಗೂ ಯಶಸ್ವಿಗಳಾದ ಕಾಶೀನಾಥ ತಿಮ್ಮಾಜಿ ಪಂತರಿಗೆ ತುಂಬಿದ ದರಬಾರಿನಲ್ಲಿ ಶಾಹೀ ದರ್ಬಾರಿನ ವರು ದಿಯಾನತ್ ರಾವ್ ಎಂಬ ಪದವಿಯನ್ನಿತ್ತು ಗೌರವಿಸುತ್ತಾರೆ. ಹೀಗಿದ್ದರೂ ಸಹ ಹಿಂದೂ ಪದ ಪಾದಶಾಹಿತ್ವದ ಪುನರುತ್ಥಾನದ ಸಂಕಲ್ಪ ದಿಂದ ಹಾಗೂ ಸಮರ್ಥ ರಾಮದಾಸರ ಸಂಪೂರ್ಣ ಅನುಗ್ರಹದಿಂದ ಈ ವಿಪತ್ತಿನಿಂದ ಶಿವಾಜಿಯು ಪಾರಾಗಿ ಹೋದುದನ್ನು ಕೇಳಿದಾಗ "ದೈವ ಮುನಿದರೆ ಯಾರೇನು ಮಾಡಬಲ್ಲರು" ಎಂಬ ಉದ್ಗಾರವನ್ನು ರಾಯರು ತಳೆಯುತ್ತಾರೆ. ಶ್ರೀಯುತರ ಕಾಲಾವಧಿಯಲ್ಲಿ ಮಥುರಾ ಹಾಗೂ ಕಾಶೀ ಕ್ಷೇತ್ರಗಳು ಮಹಮದೀಯರ ದಾಳಿಗೆ ತುತ್ತಾದಾಗ ಅವರ ಅಂತರಾತ್ಮವು ಮಮ್ಮಲ ಮರುಗುತ್ತದೆ. 1666ರಲ್ಲಿ ಶಿವಾಜಿಯು ಆಗ್ರಾ ಕೋಟೆಯಲ್ಲಿ ಬಂಧಿತನಾದನೆಂದು ಕೇಳಿದಾಗ ಹಿಡಿಸಲಾರದಷ್ಟು ಅವರು ವ್ಯಥೆ ಪಡುತ್ತಾರೆ. ಅನಂತರ ಆತ ಸುರಕ್ಷಿತವಾಗಿ ಬಿಡುಗಡೆ ಹೊಂದಿದ ನೆಂಬ ಮಾತು ಕೇಳಿಬಂದಾಗ ಸಂತೋಷ ಪಡುತ್ತಾರೆ. ರಾಯರ ಜೀವಿತ ಕಾಲದಲ್ಲಿ ಆಹಮದ್ ಆದಿಲ್‌ಷಹ, 1627 ರಿಂದ 1656, ಎರಡನೆಯ ಅಲಿ ಆದಿಲ್‌ಷಹ 1656ರಿಂದ 1672, ಸಿಕಂದರ್ ಷಹ 1672ರಿಂದ 1686. ಹೇಗೆ ಮೂರು ಜನ ಆದಿಲ್‌ಷಾಹಿ ಸಾಮ್ರಾಟರು ಆಳಿಹೋಗುತ್ತಾರೆ.

ವಿಜಾಪುರ ನಗರವನ್ನು ಔರಂಗಜೇಬನು ಸರ್ವ ನಾಶ ಮಾಡಿ ಸಿಕಂದರ್ ಶಹನಿಗೆ ಬೆಳ್ಳಿಯ ಬೇಡಿ ಗಳನ್ನು ತೊಡಿಸಿ ಮೆರವಣಿಗೆ ಮಾಡುವ ಮೊದಲೇ ಐದು ವರ್ಷಕ್ಕೆ ಮುಂಚಿತವಾಗಿ ರಾಯರ ಕಾಲವಾಗುತ್ತದೆ. ಶಿವಾಜಿ ಸಾಯುವು ದಕ್ಕಿಂತ ಒಂದು ವರ್ಷ ಮೊದಲು ರಾಯರ ನಿರ್ಯಾಣವಾಗುತ್ತದೆ. 70 ವರ್ಷಗಳ ಸುದೀರ್ಘ ಕಾಲದಲ್ಲಿ ರಾಯರು ಸಾಮ್ರಾಜ್ಯದ ಮಹೋನ್ನತಿಯ ದಿನಗಳನ್ನು ಕಂಡಿದ್ದಾರೆ. ಶಿವಾ ಜಿಯ ಅಭ್ಯುದಯವನ್ನು ಕಂಡು ಆನಂದಿಸಿದ್ದಾರೆ.

ಆಶ್ರಯವಿತ್ತ ಆದಿಲ್‌ಷಾಹಿ ಸಾಮ್ರಾಜ್ಯವು ದಿನಗಳೆದಂತೆಲ್ಲ ಕುಸಿಯುತ್ತ ಮತಾಂಧರಾದ ಮಹಮದೀಯರ ಪೈಶಾಚಿಕ ವೃತ್ತಿಗೆ ಗುರಿಯಾದಾಗ ತಳಮಳಗೊಂಡಿದ್ದಾರೆ. ಹೀಗೆ ರಾಯರ ಜೀವನದಲ್ಲಿ ಆಧ್ಯಾತ್ಮದೊಂದಿಗೆ ವ್ಯಾವಹಾರಿಕ ಏರಿಳಿತಗಳು ಒಂದುಗೂಡಿಕೊಂಡು ಬಂದಿವೆ ಅವರ ಕೃತಿಗಳಲ್ಲಿ ಈ ಏರಿಳಿತಗಳ ಹೊಳವು ಕಾಣಸಿಗುತ್ತವೆ.

ಅವರ ಕುಲಗುರುಗಳಾದ ಪ್ರಹ್ಲಾದ ಕೃಷ್ಣಾಚಾರ್ಯರು ಒಳ್ಳೆಯ ತಪಸ್ವಿಗಳು. ಶಾಸ್ತ್ರಕೋವಿದರು. ಅವರು ಕಾಶಿಯಲ್ಲಿ ಗಂಗಾತಟಾಕದಲ್ಲಿ ಅಹ್ನೀಕಕ್ಕೆ ಕುಳಿತುಕೊಂಡಿದ್ದಾಗ ತುಂಬು ಪ್ರವಾಹದ ಗಂಗೆ ಅವರ ಮೇಲೆ ಹಾದುಹೋದರೂ ನಿರ್ಭೀತರಾಗಿ ತದೇಕಚಿತ್ತದಿಂದ ಧ್ಯಾನಾಸಕ್ತರಾಗಿ, ಕುಳಿತುಕೊಂಡಿರುವುದನ್ನು ಕಂಡ ಪೀಠಾಧೀಶ್ವರರು ನಿಮ್ಮ ತಪಸ್ಸು ಪ್ರಹ್ಲಾದನಂತೆ ಎಂದು ವರ್ಣಿಸಿದ ಕಾರಣ ಆ ಮನೆತನವು ಪ್ರಹ್ಲಾದ ಕೃಷ್ಣಾಚಾರ್ಯ ಉಮ್ಮರ್ಜಿಯ ಮನೆತನವೆಂದು ಖ್ಯಾತಿಯನ್ನು ಗಳಿಸುವಂತಾಯಿತು.

ರಾಯರು ತಮ್ಮ ಇಳಿವಯಸ್ಸಿನಲ್ಲಿ ತುಂಬು ಪ್ರವಾಹದ ಕೃಷ್ಣೆಯದಂಡೆಯ ಮೇಲಿರುವ ಅನಂತಶಯನ ಸನ್ನಿಧಿಯಲ್ಲಿಯೇ ಹೆಚ್ಚಿನ ದಿನ ಕಳೆದರು. ಅವರ ದೃಷ್ಟಿಯಲ್ಲಿ ಆ ಕೃಷ್ಣೆಗೆ ಬದಲಾಗಿ ಗಂಗೆಯ ರೂಪವೇ ಕಾಣಿಸುತ್ತಿತ್ತು. ತಮ್ಮ ಗುರುಗಳನ್ನು ತದೇಕಚಿತ್ತದಿಂದ ಧ್ಯಾನ ಮಾಡುತ್ತ ಕೊನೆಗಾಲವನ್ನು ಕೃಷ್ಣಾತೀರದ ಕೊಲ್ಹಾರ್ ಗ್ರಾಮದಲ್ಲಿಯೇ ಕಳೆದರು. ಅವರನ್ನು ಚಿತಾಭಸ್ಮಮಾಡಿದ ಸ್ಥಳದಲ್ಲಿ ಒಂದು ಆಲದ ಹೆಮ್ಮರವನ್ನು ನಾವು ಕಾಣುತ್ತಿದ್ದವು. ಪಕ್ಕದಲ್ಲಿಯೇ ಅವರ ಸ್ಮಾರಕವಾದ ವೃಂದಾವನ ಇಂದಿಗೂ ನೋಡಬಹುದು. ಆದರೆ ಆ ಹೆಮ್ಮರವನ್ನು ಇಂದು ಕಡಿದೊಗೆದು ಭೂಮಿಯ ಸಾಗುವಳಿ ಮಾಡಿದ್ದಾರೆ. ಆ ಮಹಾವೃಕ್ಷದೊಂದಿಗೆ ಅವರ ಜೀವನದ ಸರ್ವಸ್ವವೂ ಹೋಯಿತೇನೋ ಎನ್ನುವಷ್ಟು ಭಾವನಾಜೀವಿಗಳು ಇಂದು ಮರುಗುವಂತಾಗಿದೆ.

ಮಹಿಪತಿರಾಯರು ಶುದ್ಧ ಅಪ್ಪಟ ಮಾಧ್ವ ಸಂಪ್ರದಾಯದ ಹರಿದಾಸ ಪಂಥದ ದಾಸಶ್ರೇಷ್ಠರು ಪುರಂದರ ದಾಸರ ನಂತರ ಅವರ ಎರಡನೆಯ ಸ್ಥಾನವನ್ನಲಂಕರಿಸುವವರು ಅವರ ಮಕ್ಕಳಲ್ಲಿ ಒಬ್ಬರು ಲೌಕಿಕರಾಗಿ ರಾಜಕಾರಣವನ್ನನುಭವಿಸಿ "ಡೋಣಿ ಶಿವಾಜೀ" ಎಂದು ಕರೆಯಿಸಿಕೊಂಡು ಅನೇಕ ಜಹಗೀರಿಗಳನ್ನು ಸಂಪಾದಿಸಿದರೂ ಸಹ ಇಂದು ಅವರ ಬಗ್ಗೆ ಯಾವ ಮಾಹಿತಿಗಳೂ ಲಭ್ಯವಾಗದಿರುವುದು ಶೋಚನೀಯ ಸಂಗತಿ. ಕೃಷ್ಣರಾಯರಿಂದ ಹಾಗೂ ಅವರ ಮೊಮ್ಮಕ್ಕಳಾದ ಕೃಷ್ಣಪ್ಪಯ್ಯನವರಿಂದ ರಚಿತವಾದ ಪದಪದ್ಯಗಳಂತೂ ದಾಸ ಸಾಹಿತ್ಯದಲ್ಲಿಯೇ ಅಜರಾಮರ ಕೃತಿಗಳೆಂದು ಕರೆಸಿಕೊಳ್ಳುವುವು. ದ್ವೈತ ದೀಕ್ಷೆಯ ಸಾಕಾರ ರೂಪವೇ ಆ ಪದ ಪದ್ಯಗಳೆಂದು ಧೈರ್ಯವಾಗಿ ಹೇಳಬಹುದು.

ವಿಜಾಪುರ ಜಿಲ್ಲೆಯು ದಾಸ ಸಾಹಿತ್ಯಕ್ಕಾಗಿ ಮಹಿಪತಿದಾಸರನ್ನು ಹಾಗೂ ಪ್ರಸನ್ನ ವೆಂಕಟ ದಾಸರನ್ನೂ ಅರ್ಪಿಸಿದ ಪುಣ್ಯಭೂಮಿ ಎಂಬ ಮಾತನ್ನು ಸ್ಮರಿಸಿಕೊಳ್ಳುವುದರಲ್ಲಿಯೇ ನಮಗೆ ಧನ್ಯತೆ ಎನಿಸುತ್ತದೆ. ★

# ಯುವವಾಣಿ

ಕೋಳೂರ ಕೊಡಗೂಸಿನ ಕಥೆ; ಬಾಲಿಕೆಯೊಬ್ಬಳ ಮುಗ್ಧಭಕ್ತಿಯನ್ನು ಪ್ರತಿಪಾದಿಸುವ ಸುಂದರವಾದ ಕಥೆ. ಈ ಕಥೆಯನ್ನು ಕನ್ನಡದ ಕವಿಗಳಾದ ಹರಿಹರ, ಭೀಮಕವಿ, ಷಡಕ್ಷರಿ ಇವರುಗಳು ತಮ್ಮ ಕಾವ್ಯಗಳಲ್ಲಿ ಮನೋಹರವಾಗಿ ಬಣ್ಣಿಸಿದ್ದಾರೆ. ಹರಿಹರ ಚಿತ್ರಿಸಿರುವ ಕೊಡಗೂಸಿನ ಕಥೆ ಹೀಗಿದೆ. ಕೊಡಗೂಸಿನ ತಾಯಿ ಮಹಾ ಶಿವಭಕ್ತೆ. ಪ್ರತಿ ಸೋಮವಾರವೂ ಆ ಊರಿನ ಕಲ್ಲಿನಾಥನಿಗೆ ಹಾಲನ್ನೆರೆದು ಬರುವುದು ಆಕೆಯ ಪದ್ಧತಿ. ಮಗಳೂ ಸಹ ಬಾಲ್ಯದಿಂದಲೇ ಕಲ್ಲಿನಾಥನಲ್ಲಿ ಅನನ್ಯವಾದ ಭಕ್ತಿ ಭಾವನೆಯನ್ನು ಬೆಳೆಸಿಕೊಂಡಳು. ಆ ಹುಡುಗಿಯ ಮನದ ಆಸೆಯೆಂದರೆ ಒಂದು ದಿನ ತಾನೂ ತನ್ನ ಮೆಚ್ಚಿದ ದೈವಕ್ಕೆ ಹಾಲುಣಿಸಬೇಕೆಂಬುದು. "ಆನೊಮ್ಮೆ ಹಾಲನೆರೆವುದನೆಂದು ಕಾಣ್ಬೆನೋ? ಆನೊಮ್ಮೆ ಶಿವನ ಚರಣವನೆಂದು ಕಾಣ್ಬೆನೋ?" ಎಂದು ತಾಯಿಯನ್ನು ಪದೇ ಪದೇ ಕೇಳುತ್ತಿದ್ದಳು.

ಒಂದು ದಿನ ಕೊಡಗೂಸಿನ ಆಸೆ ನೆರವೇರುವ ಸಂದರ್ಭ ಒದಗಿತು. ಒಮ್ಮೆ ಆಕೆಯ ತಾಯಿ ಬಹಿಷ್ಠೆಯಾಗಲು ಕಲ್ಲಿನಾಥನಿಗೆ ಸೋಮವಾರದ ಹಾಲನ್ನು ಎರೆಯುವ ಕೆಲಸ ಬಾಲಿಕೆಗೆ ಒದಗಿತು. ಕೊಡಗೂಸಿನ ಆನಂದಕ್ಕೆ ಎಣೆಯೇ ಇಲ್ಲವಾಯಿತು. ಹರಿಹರ ಕೊಡಗೂಸಿನ ಆನಂದ ಸಂಭ್ರಮಗಳನ್ನು, ಭಕ್ತಿ ಭಾವದ ಮುಗ್ಧತೆಯನ್ನು ಅತ್ಯಂತ ಮನೋಜ್ಞವಾಗಿ ವರ್ಣಿಸಿದ್ದಾನೆ. ಕೊಡಗೂಸು "ಜೀವವಿಮ್ಮಡಿಸಿದಂತೆ" ಸಂತೋಷದಿಂದ ಪುಳಕಗೊಂಡಳು. ತನಗೊದಗಿದ ಭಾಗ್ಯವನ್ನು ಒಡನಾಡಿಗಳೊಂದಿಗೆ ಜಂಬದಿಂದ ಹೇಳಿಕೊಂಡಳು. "ಇಂದೆಮ್ಮ ದೇವಂಗೆ ನಾ ಹಾಲನೆರೆದಪೆಂ, ಇಂದೆಮ್ಮ ತಂದೆಯಲ್ಲಿಗೆ ಹೋಗಿ ಬಂದಪೆಂ, ನಿಮಗುಂಟೆ ಇಂತಪ್ಪ ಸಂತೋಷಂ? ನಿಮಗೆಲ್ಲ ಇಂತಪ್ಪ ದೇವನುಂಟೆ?'' ಎಂದು ಪ್ರಶ್ನಿಸಿದಳು.

ಅಂದು ಸೋಮವಾರ ಕೊಡಗೂಸಿನ ಜೀವನದಲ್ಲಿಯೇ ಒಂದು ಪುಣ್ಯದಿನ. ಮಿಂದು ಮಡಿಯುಟ್ಟು ಶಿವಸಾನಿಧ್ಯಕ್ಕೆ ಹೋಗಲು ಸಿದ್ಧಳಾದಳು.

"ಹಾಲ ಗಡಿಗೆಯ ಮೇಲೆ ಬಟ್ಟಲಂ ಮುಚ್ಚುತ್ತುಂ ಮನದೊಳಗೆ ಶಿವಮೂರ್ತಿ ಕೈಯೊಳಗೆ ಹಾಲೊಪ್ಪೆ, ತನುವಿನೊಳು ಹರಭಕ್ತಿ ಕರಣದೊಳು ಹರನೊಪ್ಪೆ" ಹೊರಟು ನಿಂತಳು. ಶಿವಾಲಯವನ್ನು ತಲುಪುವ ವೇಳೆಗಾಗಲೆ ಆಕೆಯ ಭಕ್ತಿ ಸಾಕಾರವಾಗಿ ಶಿವನರೂಪು ಗೋಚರಿಸಿತು. "ಬೀಜದೊಳಗಂಕುರಂ ಹೊಳೆ ಹೊಳೆದು ತೋರ್ಪಂತೆ ತೇಜದೊಳಗಣ ಮೂರ್ತಿಥಳಥಳಿಸಿ ಹೊಳೆವಂತೆ'', ತಾನು ತಂದಿದ್ದ




ಹಾಲಿನ ಬಟ್ಟಲನ್ನು ತನ್ನ ದೈವದ ಮುಂದಿಟ್ಟು ಉಪಚಾರ ಮಾಡಿದಳು.

ಎನ್ನ ರನ್ನವೆ ಎನ್ನ ಹೊನ್ನೆ ಹಾಲ್ಗುಡಿಯಯ್ಯ
ಎನ್ನ ಪರಿಸವೆ ಎನ್ನ ಜನ್ನೆ ಹಾಲ್ಗುಡಿಯಯ್ಯ
ಎನ್ನರಸ ನೊರೆವಾಲನೊಲುಮೆಯಿಂ ಸವಿಯಯ್ಯ
ಎನ್ನ ಸುಖನಿಧಿಯೆ ನೀನೆನ್ನಾಣೆ ಸವಿಯಯ್ಯ

ಎಂದು ಕೇಳಿಕೊಂಡಳು. ಆದರೆ ಈಶ್ವರ ಮಾತಾಡಲೇ ಇಲ್ಲ. ಕೊಡಗೂಸಿನ ಕಳವಳ ಹೆಚ್ಚಾಯಿತು. 'ಎನ್ನಯ್ಯ ಏಕೆ ಸುಮ್ಮನಿದ್ದಿ. ನೊರೆ ಹಾಲು ತಣ್ಣಗಾಗಿ ರುಚಿ ಕೆಡುವುದು ಏಕೆ ಮಾತನಾಡದಿರುವೆ ತಂದೆ ಎಂದು ಮೊರೆಯಿಟ್ಟಳು. ಆದರೂ ಶಿವನ ಮೌನ ಮುರಿಯಲಿಲ್ಲ. ಬಾಲಿಕೆ ನೀಡಿದ ಹಾಲು ಹಾಗೆಯೇ ಉಳಿಯಿತು. ಕೊಡಗೂಸು ದುಃಖ ಭಾರದಿಂದ ಗದ್ಗದಿತಳಾಗಿ ಶಿವನಿಗೆ ತನ್ನ ಪ್ರಾರ್ಥನೆ ಸಲ್ಲಿಸಿದಳು.

ಹಾಲ್ಗುಡಿಯದಿರ್ದೊಡೆಮ್ಮವ್ವ ಬಡಿದಪಳಯ್ಯ
ಹಾಲ್ಗುಡಿಯದಿರೆ ಮನೆಗೆ ಹೋಗಲಂಜುವೆನಯ್ಯ
ಹಾಲನೆರೆಯದೆ ತಾಯನೆಂತು ನೋಡುವೆನಯ್ಯ
ಹಾಲನೆಂತಾದೊಡಂ ಕುಡಿಯಯ್ಯ ಕುಡಿಯಯ್ಯ
ಅಯ್ಯಾ ಮಹಾದೇವ, ಹಾಲ್ಗುಡಿಯದಿರ್ದಪರೇ?
ಅಯ್ಯಾ ಕರುಣಿ ಕರುಣವಿಲ್ಲದಂತಿರ್ಪರೇ?

ಎಂದು ಒಗೆ ಬಗೆಯಾಗಿ ಪ್ರಾರ್ಥಿಸಿ ಕೊನೆಗೆ ಜೋರಾಗಿ ಅಳುವುದಕ್ಕೆ ಮೊದಲು ಮಾಡ

**ಶ್ರೀ ಚಿ. ನ. ಕೃಷ್ಣಮೂರ್ತಿ**

ದಳು. ಬಾಲಿಕೆಯ ಮುಗ್ಧಭಕ್ತಿ ಶಿವನ ಮನಸ್ಸನ್ನು ತಟ್ಟನೆ ತಾಕಿತು. ಮಗುವಿನ ಆತ್ಮದ ಕೂಗಿಗೆ ದೈವದ ಮನಸ್ಸೂ ಕರಗಿತು.

ಅಳುತಿರ್ಪ ಮುಗ್ಧೆಯಂ ಕಂಡು ಕರುಣಾಕರಂ
ಬಳೆವ ಕರುಣದ ವಶಕೆ ಸಂದು ಸರ್ವೇಶ್ವರಂ
ಸತ್ಯದಳ್ಕಿಗೆ ಶಿವನ ಚಿತ್ತವಾಗಳೆ ಮರುಗೆ
ನಿತ್ಯನಿನ್ನಿರಬಾರದೆಂದು ಕೃಪೆಯೊಳಗೆ
ಭಕ್ತಿವೆರಸಿದ ಸುಧೆಯನಲ್ಲಿ ಸವಿ ನೋಳ್ಪಂತೆ
ಯುಕ್ತಿಹೊದ್ದದ ನೇಹಮಂ ಸವಿದು ನೋಳ್ಪಂತೆ
ಆಹ, ಶಿವನಲ್ಲಿ ಕೂಸಿನ ಕೈಯ ಬಟ್ಟಲಂ
ಶ್ರೀ ಹಸ್ತದಿಂ ತಳೆದುಕೊಂಡನತಿ ನಿಶ್ಚಲಂ

ಹಾಲೊಳಗೆ ಭಕ್ತಿ ಸಕ್ಕರೆಯು ಸವಿಯಂ
ಕುಡಲು
ಹಾಲನಾರೋಗಿಸಿದನಿಳೆ ಕೌತುಕಂ
ಬಡಲು

ಕೊಡಗೂಸು ಧನ್ಯಳಾದಳು. ಶಿವನೊಂದಿಗೆ ಕೈಲಾಸಕ್ಕೆ ನಡೆದಳು.

ಈ ಕಥೆಯಿಂದ ತಿಳಿದು ಬರುವ ತತ್ತ್ವವೆಂದರೆ ದೈವದ ಒಲುಮೆ ಸಂಪಾದಿಸಬೇಕಾದರೆ ತಪ, ವ್ರತ, ನೇಮಗಳಿಗಿಂತ ಮಿಗಿಲಾಗಿ ಶುದ್ಧಮನಸ್ಸಿನ ಮುಗ್ಧ ಭಕ್ತಿಯೇ ಸಾಕು.

ಶರಣ ಶರಣೆಯರ ಜೀವನವನ್ನು ಚಿತ್ರಿಸಿರುವ ಹರಿಹರ ಕವಿ ಕುಂಬಾರ ಗುಂಡಯ್ಯನ ರಗಳೆ, ಎಂಬ ಕಾವ್ಯವನ್ನು ಬರೆದಿದ್ದು ಅದರಲ್ಲಿ ಗುಂಡಯ್ಯನ ವಿಶಿಷ್ಟ ಭಕ್ತಿಯನ್ನು ನಿರೂಪಿಸಿದ್ದಾನೆ. ಭಲ್ಲೂಕ ಎಂಬ ಊರಿನಲ್ಲಿ ಗುಂಡಯ್ಯನೆಂಬ ಶಿವಭಕ್ತನಿದ್ದನು. ಆತನ ಕಾಯಕ ಮಡಿಕೆ ಮಾಡುವುದು. ಗುಂಡಯ್ಯನ ಭಕ್ತಿಯ ವೈಶಿಷ್ಟ್ಯವೆಂದರೆ ತಾನು ಮಾಡುವ ಕಾಯಕವನ್ನು ಮರೆಯದೆ ಕಾಯಕದಲ್ಲಿ ಅಪಾರ ಶ್ರದ್ಧೆ ಶಿವನಲ್ಲಿ ಅಸೀಮವಾದ ಭಕ್ತಿಯನ್ನು ಹೊಂದಿದ್ದು ಮಡಿಕೆಯನ್ನು ತಟ್ಟುತ್ತಲೇ ಕುಣಿಯುತ್ತ ಶಿವನನ್ನು ಆರಾಧಿಸುವುದು ಗುಂಡಯ್ಯನ ಇಂತಹ ಭಕ್ತಿ ಜಗತ್ತಿಗೆ ಪ್ರಕಟಗೊಳಿಸುವ ಉದ್ದೇಶದಿಂದ ಶಿವನೂ ಆತನ ಮುಂದೆ ನರ್ತಿಸಿದನೆಂದು ಹರಿಹರ ವರ್ಣಿಸಿದ್ದಾನೆ.

ಈ ಕಥೆಯಿಂದ ತಿಳಿದು ಬರುವ ತತ್ತ್ವವೆಂದರೆ ಭಗವಂತನಲ್ಲಿ ಭಕ್ತಿ ಎಂದರೆ ವ್ಯಕ್ತಿ ತಾನು ಮಾಡುವ ಕಾಯಕದಲ್ಲಿ ಹೊಂದಿರುವ ಶ್ರದ್ಧೆಯೇ ಆಗಿದೆ. ಕಾಯಕವನ್ನು ಮರೆಯದೆ ದೇವರಲ್ಲಿ ಭಕ್ತಿಯನ್ನು ಹೊಂದಿರುವುದೇ ನಿಜವಾದ ಭಕ್ತಿಯಾಗಿದ್ದು ದೇವರನ್ನು ಮುಟ್ಟುತ್ತದೆ.

ನಾರದ ಋಷಿ ಮಹಾವಿಷ್ಣುವಿನ ಮಹಾಭಕ್ತ. ಒಮ್ಮೆ ಅವನ ಮನಸ್ಸಿನಲ್ಲಿಯೂ ನಾನೇ ಶ್ರೇಷ್ಠಭಕ್ತನೆಂಬ ಅಹಂಕಾರ ಉದಿಸಿತು. ನಾರದನ ಈ ಅಹಂಭಾವವನ್ನು ಅಳಿಸಿಹಾಕುವ ಉದ್ದೇಶದಿಂದ ವಿಷ್ಣು ನಾರದನನ್ನು ಕರೆಸಿ "ಭೂಲೋಕದಲ್ಲಿ ನನ್ನ ಒಬ್ಬ ಭಕ್ತನಿದ್ದಾನೆ. ಆತನ ಭಕ್ತಿಯ ಪರಿಚಯಮಾಡಿಕೊಂಡುಬಾ" ಎಂದನು. ನಾರದನು ಭೂಲೋಕಕ್ಕೆ ಬಂದನು. ಭಗವಂತ ಹೇಳಿದ ಭಕ್ತನ ಮನೆಗೆ ಹೋಗಿ ನೋಡಿದನು. ಆತ ಒಬ್ಬ ರೈತ. ಬೆಳಗಾಗ ಎದ್ದೊಡನೆಯೆ ಒಮ್ಮೆ 'ಹರಿ' ಎಂದು ಉಚ್ಚರಿಸಿ ನೇಗಿಲನ್ನು ಹಿಡಿದು ಹೊಲಕ್ಕೆ ಹೋಗುತ್ತಿದ್ದನು. ಹೊಲದ ಕೆಲಸವನ್ನು ಮುಗಿಸಿಕೊಂಡು ಮನೆಗೆ ಬಂದು ಮಲಗುವಾಗೊಮ್ಮೆ 'ಹರಿ' ಎನ್ನುತ್ತಿದ್ದನು. ನಾರದನು ಮನಸ್ಸಿನಲ್ಲಿ "ಇಷ್ಟೆ ತಾನೆ, ಮೂರುಹೊತ್ತೂ ಹರಿನಾಮಸ್ಮರಣೆ ಮಾಡುತ್ತಿರುವ ನನ್ನ ಭಕ್ತಿಯೆಲ್ಲಿ? ದಿನಕ್ಕೆರಡು ಬಾರಿ ಮಾತ್ರ ಹರಿಯನ್ನು ಸ್ಮರಿಸುವ ಈತನೆಲ್ಲಿ? ಎಂದುಕೊಂಡು ಮತ್ತೆ ವಿಷ್ಣುಲೋಕಕ್ಕೆ ಬಂದನು. ಹರಿಯನ್ನು ಕುರಿತು, "ದೇವ, ನಿಮ್ಮ ಭಕ್ತನನ್ನು ಕಂಡಿದ್ದೆ ಆತ ನಿಮ್ಮ ನಾಮಸ್ಮರಣೆಯನ್ನು ದಿನಕ್ಕೆ ಎರಡು ಬಾರಿ ಮಾತ್ರ ಮಾಡುತ್ತಾನಷ್ಟೆ" ಎಂದನು. ಮಹಾವಿಷ್ಣು ಆಗ ನಾರದನನ್ನು ಕುರಿತು "ನಾರದಾ, ಈ ಎಣ್ಣೆ ತುಂಬಿದ ಬಟ್ಟಲನ್ನು ಹಿಡಿದು ತೊಟ್ಟು ನೆಲಕ್ಕೆ ಚೆಲ್ಲದಂತೆ ಭೂಲೋಕವನ್ನು ಸುತ್ತಿಬಾ" ಎಂದನು. ಹರಿಯ ಅಪ್ಪಣೆಯಂತೆ ನಾರದನು ಬಹು ಎಚ್ಚರಿಕೆಯಿಂದ ಎಣ್ಣೆಯ ತೊಟ್ಟು ಕೆಳಕ್ಕೆ ಬೀಳದಂತೆ ಭೂಲೋಕವನ್ನು ಸುತ್ತಿ ಬಂದನು. ವಿಷ್ಣುವು ನಾರದನನ್ನು ಕುರಿತು " ನಾರದಾ ಈಗ ಹೇಳು, ನೀನು ಭೂಲೋಕ

ವನ್ನು ಸುತ್ತುವಾಗ ಎಷ್ಟು ಬಾರಿ ನನ್ನನ್ನು ಸ್ಮರಿಸಿದೆ' ಎಂದನು. ಆಗ ನಾರದನು "ನನ್ನ ಗಮನವೆಲ್ಲ ಈ ಎಣ್ಣೆಯ ಬಟ್ಟಲಿನ ಕಡೆಗೆ ಇತ್ತು. ಅದರಿಂದಾಗಿ ನಿಮ್ಮ ಸ್ಮರಣೆ ಮಾಡಲು ಸಾಧ್ಯವಾಗಲೇ ಇಲ್ಲ" ಎಂದನು. ಆಗ ನಾರಾಯಣ, 'ನೋಡಿದೆಯಾ ನಾರದಾ ಈ ಒಂದು ಕೆಲಸ ಮಾಡುವಾಗಲೇ ನಿನ್ನಿಂದ ನನ್ನನ್ನು ಸ್ಮರಿಸಲು ಸಾಧ್ಯವಾಗಲಿಲ್ಲ. ಹೀಗಿರುವಾಗ ಆ ರೈತ ದಿನನಿತ್ಯದ ಬಿಡುವಿಲ್ಲದ ಕೆಲಸಗಳಲ್ಲಿಯೂ ಸಂಸಾರದ ಕಷ್ಟಸುಖಗಳ ನಡುವೆಯೂ ಎರಡು ಬಾರಿ ನನ್ನನ್ನು ಸ್ಮರಿಸುತ್ತಿರುವನಲ್ಲ' ಎಂದಾಗ ನಾರದನು ನಾಚುವಂತಾಯಿತು.

ಕನ್ನಡದ ಶಿವ ಶರಣರು ಶ್ರೇಷ್ಠ ಭಕ್ತರು. ಅವರ ಭಕ್ತಿಯ ರೀತಿ ಎಂತಹದು ಎಂದರೆ ಇತರ ಶರಣರಿಗೆ ಅಡಿಗೆ, ತಿಂಡಿ, ಮಾಡಿಡುವುದು ಎಲ್ಲರಿಗೂ ಬಡಿಸುವುದು, ಪರಿಚರ್ಯೆ ಮಾಡುವುದು ಮುಂತಾಗಿ ಈ ಎಲ್ಲ ಕೆಲಸಗಳೂ ಭಗವಂತನಿಗೆ ಸಲ್ಲಿಸುವ ಸೇವೆ ಎಂದು ತಿಳಿದಿದ್ದರವರು. ಶುದ್ಧಾಂತಃಕರಣದ ಆ ಶರಣರು ಎಲ್ಲರೊಡನೆ ಅಪಾರವಾದ ಪ್ರೇಮಾದರಗಳನ್ನು ತೋರುತ್ತಿದ್ದರು. ಭಗವಂತ ಸದಾಕಾಲ ತಮ್ಮೊಡನೆ ನೆಲಸಿರುವನೆಂದು ತಿಳಿದಿದ್ದರು.

ಈ ಎಲ್ಲ ಕಥೆಗಳಿಂದ ತಿಳಿದು ಬರುವ ವಿಚಾರವೆಂದರೆ ದೇವರಲ್ಲಿ ಭಕ್ತಿ ಎಂದರೆ ಶುಷ್ಕವಾದ ಜಪತಪಾದಿಗಳಾಗಲಿ, ಎಡೆಬಿಡದ ಪೂಜೆ ಪುನಸ್ಕಾರಗಳಾಗಲಿ ಅಲ್ಲ. ನಿರ್ಮಲವಾದ ಮನಸ್ಸಿನಿಂದ ಭಗವಂತನನ್ನು ನೆನೆಯುವುದು. ತನ್ನ ಕರ್ತವ್ಯವನ್ನು ಅಲಕ್ಷಿಸದೆ ಶ್ರದ್ಧೆಯಿಂದ ನಿರ್ವಹಿಸುವುದು. ಸರ್ವರಲ್ಲಿಯೂ ಪ್ರೀತಿ ವಿಶ್ವಾಸಗಳನ್ನು ತೋರಿ ಭಗವಂತನ ಒಲುಮೆಯನ್ನು ಗಳಿಸುವುದೇ 'ಭಕ್ತಿ' ಎನಿಸಿಕೊಳ್ಳುವುದು.

ಮನುಷ್ಯ ತನಗೆ ಕಷ್ಟಗಳು ಒದಗಿದಾಗ ಮಾತ್ರ ಅವುಗಳ ಪರಿಹಾರಕ್ಕೆ ಕಾಣದ ದೈವಕ್ಕೆ ಮೊರೆಯಿಡುತ್ತಾನೆ. ಡಿ. ವಿ. ಜಿ. ಅವರು ಮಾನವನ ಭಕ್ತಿ ಎಂತಹುದು ಎಂಬುದನ್ನು ಹೀಗೆ ಹೇಳಿದ್ದಾರೆ.

ಕತ್ತಲೆಯೊಳೇನನೋ ಕಂಡು ಬೆದರಿದ
ನಾಯಿ,
ಎತ್ತಲೋ ನಭದಿನೋರ್ವನಿಹನೆಂದು
ನಂಬಿ
ಕತ್ತೆತ್ತಿ ಊಳಿಡುತ ಬೊಗಳಿ
ಹಾರಾಡುವುದು
ಭಕ್ತಿಯಂತೆಯೆ ನಮದು–ಮಂಕುತಿಮ್ಮ

ಎಲ್ಲಕ್ಕಿಂತ ಮಿಗಿಲಾದ ಅಲೌಕಿಕ ಶಕ್ತಿಯೊಂದು ಲೋಕವನ್ನು ನಡೆಸುತ್ತಿರುತ್ತದೆ ಎಂಬ ತಿಳಿವಳಿಕೆಯಿಂದ ಮನುಷ್ಯ ಆ ಶಕ್ತಿಯನ್ನು ನಂಬಬೇಕು. ನಂಬಿಯೂ ನಂಬದಂತೆ ನಡೆದರೆ ಭಗವಂತನ ಅನುಗ್ರಹ ದೊರೆಯುವುದಿಲ್ಲ. ಡಿ. ವಿ. ಜಿ. ಅವರು ಮನುಷ್ಯನ ಈ ಸ್ವಭಾವವನ್ನು ತುಂಬ ಸ್ವಾರಸ್ಯವಾಗಿ ಹೇಳಿದ್ದಾರೆ.

ನಂಬದಿದ್ದನು ತಂದೆ ನಂಬಿದನು
ಪ್ರಹ್ಲಾದ
ನಂಬಿಯುಂ ನಂಬದವನಿಬ್ಬಂದಿ ನೀನು
ಕಂಬದಿನೋ ಬಿಂಬದಿನೊ ಮೋಕ್ಷವವ
ರಿಂಗಾಯ್ತು
ಸಿಂಬಳದಿ ನೊಣ ನೀನು–ಮಂಕುತಿಮ್ಮ.

ಆದ್ದರಿಂದ ಭಗವಂತನನ್ನು ನಂಬಿ ನಿಷ್ಠೆಯಿಂದ ಕೊಡಗೂಸಿನಂತೆ ಕರೆದರೆ ಭಗವಂತ ನಮ್ಮ ಕರೆಗೆ ಉತ್ತರ ಕೊಡುತ್ತಾನೆ. ಇದರ ಅಂತರ ಕರೆಗಳಲ್ಲಿ ಅಂತರಂಗ ಶುದ್ಧಿ ಇರಬೇಕು. ಮನಸ್ಸು ದೃಢವಾಗಿರಬೇಕು. ನಂಬದೆ ನಚ್ಚದೆ ಕರೆದರೆ ದೈವಕ್ಕೆ ನಮ್ಮ ಕರೆ ಖಂಡಿತ ಕೇಳಿಸುವುದಿಲ್ಲ. ಆದ್ದರಿಂದಲೇ ಬಸವಣ್ಣನವರು,

ಎನಿತು ಕಾಲ ಕಲ್ಲು ನೀರೊಳಗಿದ್ದರೇನು
ನೆನೆದು ಮೃದುವಾಗಬಲ್ಲುದೇ
ಎನಿತು ಕಾಲ ನಿಮ್ಮ ಪೂಜಿಸಿ
ಏವೆನಯ್ಯಾ
ಮನದಲ್ಲಿ ದೃಢವಿಲ್ಲದನ್ನಕ್ಕ
ನಿಧಾನವ ಕಾಯ್ದಿರ್ದ ಬೆಂತರನಂತೆ
ಅವರ ವಿಧಿಯಾನಾಯಿತ್ತು ಕೂಡಲ
ಸಂಗಮ ದೇವಾ.

ಎಂದಿದ್ದಾರೆ. ದೈವ ಸುಲಭವಾಗಿ ಒಲಿಯುವುದಿಲ್ಲ. ಭಗವಂತನ ಆಗಮನ ಭಕ್ತರು ನಿರೀಕ್ಷಿಸುವಷ್ಟು ಸುಲಭವಲ್ಲ. ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ'ದಲ್ಲಿ ದೈವದ ಆಗಮನವನ್ನು ಕುರಿತ ಮಾತು ಹೀಗಿದೆ.

ಭಗವದಾಗಮನಮೇಂ
ಭಕ್ತನ ನಿರೀಕ್ಷಿಸಿದ ರೂಪದಿಂ
ಬಂದಪುದೇ ?



ಕಾಕತೀಯರ ರಾಜಧಾನಿಯಾಗಿ ಪ್ರಸಿದ್ಧಿ ಹೊಂದಿದ ಓರಂಗಲ್‌ನ ಹೊಯ್ಸಳ ವಿನ್ಯಾಸದ ತ್ರಿಕೂಟಾಚಲದ ದೇವಾಲಯ, 'ಸಾವಿರಕಾಲಿನ ಮಂಟಪದ ಗುಡಿ'ಯೆಂದು ಹೆಸರಾದ ಈ ಆಲಯದಲ್ಲಿ ರುದ್ರೇಶ್ವರ, ಮಹಾವಿಷ್ಣು, ಸೂರ್ಯನಾರಾಯಣ ಗರ್ಭಗುಡಿಗಳಿವೆ. ಚಿತ್ರ : ಕೆ. ಜಗದೀಶ್.

ಸುಖದವೋಲಾಶಿಸಲ್ ದುಃಖದೊಲ್
ಮೈದೋರಿ
ಭಕ್ತನನಿತಂ ಸುಲಿದು ನೈವೇದ್ಯಮಂ
ಕೊಳದೆ
ಪೇಳ್ ಅಹಂಕಾರಮಂ ದಿವ್ಯ ಶೂನ್ಯತೆ
ಗದ್ದುವೊರ್
ಸಂಪೂರ್ಣತಾ ಸಿದ್ಧಿಯೊಳ್.

ದೈವ ಭಕ್ತನನ್ನು ನಿರಂತರವಾಗಿ ಪರೀಕ್ಷಿಸುತ್ತಲೇ ಇರುತ್ತದೆ. ಕಷ್ಟನಷ್ಟ ದುಃಖ ತೊಂದರೆಗಳ ಪರಂಪರೆಯನ್ನು ಎದುರಿಸುವಂತೆ ಮಾಡುತ್ತಿರುತ್ತದೆ. ಅಂತಹ ಯಾವುದೇ ಸಮಯದಲ್ಲಿ ನಾವು ಹೆದರದೆ, ಭಗವಂತನ ಮೇಲಿನ ನಂಬಿಕೆಯನ್ನು ಕಳೆದುಕೊಳ್ಳದಿದ್ದರೆ ದೈವದ ಸಹಾಯ ದೊರತೇ ದೊರಯುತ್ತದೆ. ದೇವರೇ ನಮ್ಮೆಡೆಗೆ ಧಾವಿಸುತ್ತಾನೆ.

ದೇವರ ದಾಸಿಮಯ್ಯ ಎಂಬ ವಚನಕಾರ ಆಳಿಮನದ ಭಕ್ತಿಯನ್ನು ಮಾರ್ಮಿಕವಾಗಿ ಹೇಳಿದ್ದಾನೆ.

ಹರಿದ ಗೋಣಿಯುಲೊಬ್ಬ ಕಳವೆಯ
ತುಂಬಿದ
ಇರುಳೆಲ್ಲ ನಡೆದನಾ ಸುಂಕಕ್ಕಂಜಿ
ಕಳವೆಯೆಲ್ಲ ಹೋಗಿ ಬರಿಯ ಗೋಣಿ
ಉಳಿಯಿತ್ತು
ಆಳಿಮನದವನ ಭಕ್ತಿ ಇಂತಾಯಿತ್ತು
ರಾಮನಾಥಾ.

ಆದ್ದರಿಂದ ಆಳಿಮನದ ಭಕ್ತಿ ವ್ಯರ್ಥವಾಗಿ, ನಮ್ಮನ್ನು ದಡ ತಲುಪಿಸುವುದಿಲ್ಲ. ಯಾವ ಪ್ರತಿ ಫಲದ ಅಪೇಕ್ಷೆಯೂ ಇಲ್ಲದೆ ಭಗವಂತನಲ್ಲಿ ಹೊಂದಿರುವ ನಿರ್ಮಲವಾದ ಪ್ರೇಮವೊಂದೇ ನಮ್ಮಲ್ಲಿ ದೃಢವಾದ ಭಕ್ತಿಯನ್ನು ಬೆಳಸುತ್ತದೆ.

ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ
ಆ ಪೂಜೆಯು ಆ ಮಾಟವು
ಚಿತ್ರದ ರೂಹು ಕಾಣಿರಣ್ಣಾ, ಚಿತ್ರದ
ಕಬ್ಬು ಕಾಣಿರಣ್ಣಾ,
ಅಪ್ಪಿದರೆ ಸುಖವಿಲ್ಲ, ಮೆಲಿದರೆ
ರುಚಿಯಿಲ್ಲ
ಕೂಡಲ ಸಂಗಮದೇವ ನಿಜವಿಲ್ಲದವನ
ಭಕ್ತಿ

ಎಂದು ಬಸವಣ್ಣನವರೂ ಸಹ ತೋರಿಕೆಯ ಭಕ್ತಿ ವ್ಯರ್ಥವೆಂದು ಹೇಳಿದ್ದಾರೆ.

ನಮ್ಮ ಮನಸ್ಸು ಲೌಕಿಕವಾದುವುಗಳನ್ನು ಅಪೇಕ್ಷಿಸಿ ಅವುಗಳ ಗಳಿಕೆಗಾಗಿ ದೇವರನ್ನು ಪೂಜಿಸಿದ್ದೇ ಆದರೆ ಅದು ನಿಜವಾದ ಭಕ್ತಿ ಎನಿಸಿಕೊಳ್ಳುವುದಿಲ್ಲ. ಏಕೆಂದರೆ ನಮ್ಮ ಕಾಮನೆಗಳು ಈಡೇರಿದೊಡನೆಯೇ ದೇವರ ಮೇಲಿನ ಭಕ್ತಿಯೂ ಇಳಿಯುತ್ತ ಹೋಗುತ್ತದೆ. ಆದರೆ ನಿಜವಾದ ಭಕ್ತಿ ಹಿಂದು ರೀತಿಯಲ್ಲಿ ತಮ್ಮದೆಲ್ಲವನ್ನೂ ಭಗವಂತನಿಗೆ ಸಮರ್ಪಿಸಿಕೊಳ್ಳುವ ಆತ್ಮನಿವೇದನೆಯೇ ಆಗಿರುತ್ತದೆ. ಅಂತಹ ಭಕ್ತಿಯಲ್ಲಿ ಯಾವ ಬೇಡಿಕೆಗಳೂ ಇರುವುದಿಲ್ಲ. ಅದು ಶುದ್ಧ ಹಾಗೂ ನಿರ್ಮಲವಾದ ಪ್ರೇಮ ಮಾತ್ರವಾಗಿರುತ್ತದೆ

ಮಾನವನ ವಿಕಾಸಶೀಲ ಬದುಕನ್ನು ಪರಿಶೀಲಿಸಿದಾಗ ಕಂಡು ಬರುವ ಕೆಲವು ಮುಖ್ಯ ಅಂಶಗಳು ಎಂದರೆ ಮಾನವ ಜೀವನದ ಗುರಿ ಹೋರಾಟ, ಇವೆಲ್ಲದರ ಹಿಂದಿರುವ ಶಕ್ತಿ, ಮಾನವನಿಗೆ ಆ ಶಕ್ತಿಯಲ್ಲಿನ ನಂಬಿಕೆ ಇವುಗಳು ಬೆಳೆಯುತ್ತಾ ಹೋದ ಹಾಗೆ ಮಾನವ ಮನಸ್ಸಿನಲ್ಲಿ ಭಕ್ತಿ ಎಂಬುದು ಹುಟ್ಟಿತು. 'ಧರ್ಮ' ಎಂಬುದು ಹುಟ್ಟುವುದಕ್ಕೂ ಇವೇ ಕಾರಣಗಳಾದವು. ಇವೆಲ್ಲವುಗಳನ್ನು ಮನುಷ್ಯ ತನ್ನ ವಿವೇಚನೆಗೆ ಒಳಪಡಿಸಿ ಸತ್ಯಾಸತ್ಯಗಳನ್ನು ಕಂಡು ಕೊಳ್ಳಬೇಕು. ಅವನ ಅನುಭವ, ಜ್ಞಾನ, ವಿಜ್ಞಾನಗಳು ಬೆಳೆದ ಹಾಗೆ ಈ ಸಂಗತಿಗಳ ವಾಸ್ತವ ಸ್ವರೂಪ ಗೋಚರಿಸುತ್ತ ಹೋಗುತ್ತದೆ ಇಹದ ಬಂಧನಗಳೆಲ್ಲವೂ ಬಿಡುಗಡೆಯ ಸಾಧನೆಗಳು ಎಂದು ತಿಳಿದು ಪರಿಶುದ್ಧವಾದ ಮನಸ್ಸಿನಿಂದ ಸಾಧನೆಯ ಹಾದಿಯಲ್ಲಿ ನಡೆದರೆ ಜೀವನದ ಗುರಿ ತಾನಾಗಿ ತೋರುತ್ತದೆ. ಮನಸ್ಸಿನ ಕಳವಳ ತಾಮಸ ದೂರವಾಗುತ್ತದೆ. ಜಗದ ಚಲನೆಗೆ ಕಾರಣವಾದ ಆ ಶಕ್ತಿಗೆ ತನ್ನನ್ನೇ ಅರ್ಪಿಸಿಕೊಳ್ಳುತ್ತಾನೆ. ಆ ಮೂಲಕ ತನ್ನಲ್ಲಿರುವ ಅಹಂಕಾರವನ್ನು ಕಳೆದುಕೊಳ್ಳುತ್ತಾನೆ. ಇದೇ ನಿಜವಾದ ಭಕ್ತಿಯಾಗಿದ್ದು ಈ ಭಕ್ತಿ ಮಾರ್ಗದಲ್ಲಿ ನಡೆದಾಗ ದೇವರಿಗೆ ಹೆಚ್ಚು ಹೆಚ್ಚು ಸಮೀಪವಾಗುತ್ತ ಹೋಗುತ್ತೇವೆ.

# ವಸಂತಪುರದ ಶ್ರೀ ವಲ್ಲಭರಾಯಸ್ವಾಮಿ

ವಸಂತಪುರ ಮಹಾಕ್ಷೇತ್ರವು ಬೆಂಗಳೂರು ನಗರದ ಹೊರವಲಯದಲ್ಲಿ ನಗರಕ್ಕೆ ಸುಮಾರು 7–8 ಮೈಲಿ ದೂರದಲ್ಲಿದೆ. ಇದು ಬೆಂಗಳೂರು ಗ್ರಾಮಾಂತರದ ಉತ್ತರ ಹಳ್ಳಿ ತಾಲೂಕಿನ ಮಹಾ ಕ್ಷೇತ್ರಗಳಲ್ಲಿ ಒಂದು ಪುರಾಣ ಪ್ರಸಿದ್ಧವಾದ ಈ ಕ್ಷೇತ್ರವು ಅನಾದಿಕಾಲದಿಂದಲೂ ಹೆಸರುವಾಸಿಯಾಗಿದೆ ವಸಂತಪುರದ ಸ್ಥಳ ಮಹಾತ್ಮೆಯ ನಾಲ್ಕನೆಯ ಅಧ್ಯಾಯದಲ್ಲಿ ಬರುವ "ಶ್ರೀ ಕರ್ಣಾಟಕ ದೇಶ ಮಧ್ಯೆ ವಿಲಸತ್ ಕಲ್ಯಾಣ ಪುರೀ ಬಹಿಃ" ಎನ್ನುವ ವಾಕ್ಯವು ಕರ್ನಾಟಕ ಪ್ರಾಂತದಲ್ಲಿ ಕಲ್ಯಾಣ ಪುರಿಯ ಹೊರವಲಯದಲ್ಲಿ ಈ ಮಹಾ ಕ್ಷೇತ್ರವು ಇದೆ ಎನ್ನುವುದನ್ನು ದೃಢೀಕರಿಸುತ್ತದೆ. ಭೂ–ನೀಳಾ ಸಮೇತನಾದ ಶ್ರೀ ವಸಂತ ವಲ್ಲಭರಾಯನೇ ಇಲ್ಲಿನ ಆರಾಧ್ಯ ದೈವ, ಈತನನ್ನು ತಿರುಪತಿಯ ತಿಮ್ಮಪ್ಪನ ಅಪರಾವತಾರವೆಂದು ಹೇಳುವ ವಾಕ್ಯವು– 'ಸಾಕ್ಷಾತ್ ಶೇಷಾದ್ರಿ ವಾಸೋಯಂ ಇತಿ ಬುದ್ಧಿ ರಜಾಯತ' ಎನ್ನುವುದೂ, 'ವಸಂತ ವಲ್ಲಭರಾಯ ಸ್ವಾಮೀ ಶ್ರೀನಿವಾಸ ಸಮೋ ಭುವಿ,' ಎನ್ನುವುದೂ ಸ್ಥಳ ಪುರಾಣದಲ್ಲೇ ಅಂತರ್ಗತವಾಗಿ ಬಂದಿದೆ.

ತಿರುಪತಿ ತಿಮ್ಮಪ್ಪನನ್ನು ಸೇವೆ ಮಾಡ ಬಯಸುವವರೂ, ಆ ಕ್ಷೇತ್ರದ ಯಾತ್ರೆ ಕೈಗೊಳ್ಳಲು ಇಚ್ಛಿಸಿದವರೂ, ಅಶಕ್ತರೂ, ತಿರುಪತಿಯನ್ನು ಸಂದರ್ಶಿಸಲಾಗದಿದ್ದಲ್ಲಿ ವಸಂತವಲ್ಲಭನನ್ನು ಅರ್ಚಿಸಿದರೆ ತಿರುಪತಿ ಒಡೆಯನಿಂದ ಪಡೆಯಬಹುದಾದ ಪುಣ್ಯವು ಇವನಿಂದಲೇ ದೊರಕುವುದಂತೆ. ಆದ್ದರಿಂದಲೇ :–

"ಶೇಷಾದ್ರಿ ವಾಸಂ ಸಂದ್ರಷ್ಟುಂ
ಯೇ ಹ್ಯಶಕ್ತಾ ಜನಾಃ
ಇಹ ತೇ ವಸಂತ ಪುರಾಧೀಶಂ ದೃಷ್ಟ್ವಾ
ಮುಕ್ತಾಸ್ತೇ ಕಿಲ್ಬಿಷೈಃ"

ಎಂದು ಹೇಳಲಾಗಿದೆ.

ಈತನನ್ನು ಪೂಜಿಸಿದರೆ ಸರ್ವಪಾಪಗಳೂ ನಾಶವಾಗುವುದಂತೆ. ಆದ್ದರಿಂದಲೇ 'ಅಗತ್ಯ ಪೂಜಯಂ ತ್ವೇನಂ ಸರ್ವಪಾಪ ವಿಮುಕ್ತಯೇ' ಎನ್ನಲಾಗಿದೆ ಭಕ್ತರ ಉದ್ಧಾರಕ್ಕಾಗಿಯೇ – 'ಸಂಸಾರಾರ್ಣವ ಮಗ್ನ ಜಂತು ನಿವಹಾನ್ ಉದ್ಧರ್ತುಂ ಉತ್ಕಂಠಯಾ' ಆಗಿ ಭಗವಂತ ಇಲ್ಲಿ ನೆಲೆಸಿರುವನಂತೆ.

ಮಾಂಡವ್ಯರ ಶಿಷ್ಯರು ಒಂದು ದಿನ ಇದ್ದಕ್ಕಿದ್ದಂತೆ ಆಶ್ರಮದಲ್ಲಿದ್ದ ತಮ್ಮ ಗುರುಗಳನ್ನು ಕಾಣದೆ ಖಿನ್ನರಾದರು ಅನಂತರ ಗುರುಗಳನ್ನು ಹುಡುಕಿಕೊಂಡು ಶಿಷ್ಯರೆಲ್ಲರೂ ಹೊರಟರು. ಎಲ್ಲಿ ಹುಡುಕಿದರೂ ಗುರುಗಳು ಕಂಡು ಬರಲಿಲ್ಲ. ಹಾಗೆಯೇ ಹುಡುಕುತ್ತಾ ವಿಂಧ್ಯಪರ್ವತದ ದಕ್ಷಿಣ ಭಾಗದಲ್ಲಿನ ಕಲ್ಯಾಣಪುರಿಗೂ (ಬೆಂಗಳೂರಿಗೂ)ಬಂದರು. ಆಗ ನಗರದ ದಕ್ಷಿಣ ದಿಕ್ಕಿನಲ್ಲಿ ಹೊರವಲಯದಲ್ಲಿನ ಒಂದು ಪರ್ವತದ ಮೇಲೆ ಗುರುಗಳು ನೆಲೆಸಿರುವುದನ್ನು ಕಂಡು ಸಂತೋಷಗೊಂಡರು. ಗುರುಗಳಿಗೆ ಕೂಡಲೇ ನಮಸ್ಕರಿಸಿ, ಅವರು ಅಲ್ಲಿಗೆ ಬಂದು ನೆಲಸಿದ ಕಾರಣವನ್ನು ಕೇಳಿದರು– ತಮ್ಮ ವಸಂತಪುರದ ವಾಸ್ತವ್ಯವನ್ನು ಗುರುಗಳು ಈ ರೀತಿ ಬಹಳ ವಿಶೇಷವಾಗಿ ವಿವರಿಸಿದಂತೆ:

"ಆಶ್ರಮದಿಂದ ಹೊರಟ ನಾನು– 'ಬದರೀಶಂ ನಮಸ್ಕರ್ತುಂ ಗತೋ ಬದರಿಕಾಶ್ರಮಂ'– ಬದರೀನಾರಾಯಣನನ್ನು ಸೇವೆ ಮಾಡಲು ಬದರೀ ಕ್ಷೇತ್ರಕ್ಕೆ ಹೋದೆ ಅನಂತರ ಆತನನ್ನು ಬಹಳಕಾಲ ಅರ್ಚಿಸಿ ದಕ್ಷಿಣ ಬದರಿ ಎಂದು ಪ್ರಸಿದ್ಧವಾದ ಮೇಲುಕೋಟೆಗೆ ಬಂದೆ. ಮೇಲುಕೋಟೆಯಲ್ಲಿ ಚೆಲುವ ನಾರಾಯಣನನ್ನೂ ಬೆಟ್ಟದಮೇಲಿನ ನರಸಿಂಹನನ್ನು ಅರ್ಚಿಸುತ್ತಲಿದ್ದೆ. ಒಂದು ದಿನ ನನಗೆ ಕನಸೊಂದು ಬಿತ್ತು. ಆ ಕನಸಿನಲ್ಲಿ ಪರಮಾತ್ಮನು ಇಲ್ಲಿ ನೆಲೆಸಿರುವುದಾಗಿ ಕಂಡಿತು. ಆದ್ದರಿಂದಲೇ ನಾನು ಇಲ್ಲಿಗೆ ಬಂದು ಆತನನ್ನು ಅರ್ಚಿಸುತ್ತಿರುವೆ"ಎಂದು ತಮ್ಮ ಕಥೆಯನ್ನು ವಿವರಿಸಿದರು

**ಶ್ರೀ ಎನ್. ಮುರಳೀಧರ್**

ಭಗವಂತ ಇಲ್ಲಿ ಉದ್ಭವಮೂರ್ತಿಯಾಗಿ, ಅರ್ಚಾರೂಪಿಯಾಗಿ ನೆಲಸಿದ್ದಾನೆ. ಆದ್ದರಿಂದಲೇ ಇದನ್ನು ಮಾಂಡವ್ಯ ಕ್ಷೇತ್ರವೆಂದು ಹೇಳಲಾಗಿದೆ.

"ಶ್ರೀ ಮಾಂಡವರ್ಷಿ ಪರಿಪೂಜಿತ
ಪಾದಪದ್ಮ
ಶ್ರೀಭೂಸಮೇತ ನತಭಕ್ತ ಜನಾರ್ತಿ
ಹಾರಿನ್
ಶ್ರೀಮನ್ ವಸಂತ ಪದಪೂರ್ವಕ
ಮಾಧವಾಖ್ಯ
ಶ್ರೀಶ ಪ್ರಭೋ ತವ ಸದಾಸ್ತು
ಸುಸುಪ್ರಭಾತಂ"

ಎಂದೂ ಸುಪ್ರಭಾತದಲ್ಲಿ ಹೇಳಿದೆ.

ಆನಂದ ಸಾಗರದಲ್ಲಿ ಮುಳುಗಿ ವೈಕುಂಠದಲ್ಲಿ ನೆಲಸಿ ನಿತ್ಯವೂ ಮುಕ್ತರಿಂದ ಸೇವೆ ಮಾಡಿಸಿಕೊಳ್ಳುತ್ತಿದ್ದ ಶ್ರೀಮನ್ನಾರಾಯಣನಿಗೂ ಒಮ್ಮೆ ಚಿಂತೆ ಹುಟ್ಟಿತಂತೆ. ಆ ಚಿಂತೆಯೂ ಸಹ ಪರಮ ವಿಚಿತ್ರವಾದುದೇ. 'ಪರೋಪಕಾರ ಮತ್ತು ಮೋಕ್ಷ ಇವೆರಡರಲ್ಲಿ ಯಾವುದು ಶ್ರೇಷ್ಠ ?', ಎಂದು.

'ಪರೋಪಕಾರ ಮೋಕ್ಷಂ ಚ ತೋಲ
ಯಿತ್ವಾ ಹರಿಸ್ತಥಾ
ಮೋಕ್ಷಾದುಪಕೃತೀಂ ಗುರ್ವೀಂ
ಜ್ಞಾತ್ವಾ

ಆಗ ಹರಿಯು ಮೋಕ್ಷ ಪರೋಪಕಾರಗಳೆರಡನ್ನು ತಕ್ಕಡಿಯಲ್ಲಿ ಇಟ್ಟು ತೂಗಿದ. ಮೋಕ್ಷಕ್ಕಿಂತ ಪರೋಪಕಾರವೇ ಭಾರವಾಗಿತ್ತು. ಅನಂತರ ಹರಿಯು ಮತ್ಸ್ಯಾದಿ ರೂಪಗಳನ್ನು ಪಡೆದು ಪರಮ ಮೋಕ್ಷಸ್ಥಾನವಾದ ವೈಕುಂಠವನ್ನು ಬಿಟ್ಟು ರಾಮ ಕೃಷ್ಣಾದ್ಯವತಾರಗಳನ್ನು ಪಡೆದು ಅನೇಕ ಕಷ್ಟಗಳನ್ನು ಸಹಿಸಿಕೊಂಡು ಈ ಸಂಸಾರಿಗಳನ್ನು ಉದ್ಧರಿಸಿದನು.

ಪರ, ವ್ಯೂಹ, ವಿಭವ, ಅಂತರ್ಯಾಮಿ ಮತ್ತು ಅರ್ಚಾ ಎಂಬ ಐದು ರೂಪಗಳಲ್ಲಿ ಭಗವಂತನ ಸೇವೆಯನ್ನು ಪೂರ್ವಿಕರು ವಿಭಜಿಸಿದ್ದಾರೆ. ವಸಂತಪುರದ ವಲ್ಲಭರಾಯ ಸ್ವಾಮಿ ಅರ್ಚಾರೂಪಿ. ಈತ ಕೇವಲ ಅರ್ಚನೆಯಿಂದಲೇ ಮೋಕ್ಷ ನೀಡುವನಂತೆ.

## ಪೂಜಾ ಉತ್ಸವಗಳು

ವಸಂತ ವಲ್ಲಭರಾಯಸ್ವಾಮಿಗೆ ದ್ರಾವಿಡ ಆಚಾರ್ಯರ ಸಂಪ್ರದಾಯದಂತೆ. ಪಾಂಚರಾತ್ರಾಗಮದಂತೆ ಪೂಜಾ ಕೈಂಕರ್ಯಗಳು ಪ್ರತಿನಿತ್ಯವೂ ನಡೆಯುತ್ತವೆ. ಮಾಘ ಶುದ್ಧ ಅಷ್ಟಮಿಯಂದು ಬ್ರಹ್ಮ ರಥೋತ್ಸವವು ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ಬ್ರಹ್ಮರಥೋತ್ಸವದ ಅಂಗವಾಗಿ ೯ ದಿವಸ ವಿಶೇಷ ಉತ್ಸವಗಳು ನಡೆಯುತ್ತವೆ. ಇದರೊಂದಿಗೆ ವಸಂತೋತ್ಸವ ಮತ್ತು ತೆಪ್ಪೋತ್ಸವಗಳೂ ನಡೆಯುತ್ತವೆ. ಶ್ರಾವಣ ಮಾಸದಲ್ಲಿ ಮತ್ತು ಧನುರ್ಮಾಸದಲ್ಲಿ ವಿಶೇಷ ಉತ್ಸವಗಳೂ, ದೀಪಾವಳಿ, ಯುಗಾದಿ ಮುಂತಾದ ದಿನಗಳಲ್ಲಿ ವರ್ಷೋತ್ಸವಗಳೂ ನಡೆಯುತ್ತವೆ.

ವಸಂತ ವಲ್ಲಭರಾಯನ ದೇವಾಲಯವು ಶಾಸ್ತ್ರರೀತ್ಯಾ ನಿರ್ಮಿಸಲ್ಪಟ್ಟಿದ್ದು. ಪೂರ್ವಾಭಿಮುಖವಾಗಿದೆ. ವಿಶಾಲವಾದ ದೇವಾಲಯ, ಮಂಟಪ, ಪ್ರಾಕಾರ, ಗೋಪುರ ಮತ್ತು ಧ್ವಜಸ್ತಂಭಾದಿಗಳನ್ನು ಒಳಗೊಂಡಿದೆ. ದೇವಾಲಯದ ಸುತ್ತಲೂ ಶಂಖ ತೀರ್ಥ, ಚಕ್ರತೀರ್ಥ, ಸ್ನಾನತೀರ್ಥ, ನಾಸಂತತೀರ್ಥ ಮತ್ತು ದೇವತೀರ್ಥಗಳೆಂಬ ತೀರ್ಥಗಳು ಇವೆ. ಷೋಡಶ ಹಾಗೂ ಶತ ಸ್ತಂಭ ಮಂಟಪಗಳೂ, ಗಜೇಂದ್ರ ಮಂಟಪವೂ ಇವೆ. ಸ್ವಾಮಿಯವರನ್ನು ಆಯಾ ಉತ್ಸವದ ದಿನ ವಿಶೇಷವಾದ ತೀರ್ಥಗಳ ಬಳಿಗೂ, ಮಂಟಪಗಳಿಗೂ ಕೊಂಡೊಯ್ದು ಪೂಜಿಸುವರು.

ವಸಂತಪುರ ಇಂದು ಕೇವಲ ವೈಷ್ಣವ ಕ್ಷೇತ್ರವಾಗಿ ಉಳಿದಿಲ್ಲ. ಪಕ್ಕದಲ್ಲೇ ಈಶ್ವರನ ದೇವಾಲಯವೂ ಇದೆ. ಇದೇ ಈಶ್ವರನ ದೇವಾಲಯದ ಆವರಣದಲ್ಲಿ ತ್ಯಾಗರಾಜ, ನವಗ್ರಹ ಮುಂತಾದ ವಿಗ್ರಹಗಳೂ ಪ್ರತಿಷ್ಠಾಪಿಲಸ್ಪಟ್ಟಿವೆ. ಈ ದೇವಾಲಯದಲ್ಲಿ ನಡೆಯುವ ತ್ಯಾಗರಾಜ ಹಾಗೂ ಪುರಂದರ ದಾಸರ ಆರಾಧನೆಗಳು ಪ್ರಸಿದ್ಧವಾದವು. ವಸಂತವಲ್ಲಭನನ್ನು ಮತ್ತು ಈಶ್ವರನನ್ನು ತೆಪ್ಪೋತ್ಸವದಂದು ಒಟ್ಟಿಗೇ ಉತ್ಸವಕ್ಕೆ ಕೊಂಡೊಯ್ಯುತ್ತಾರೆ. ಇಬ್ಬರಿಗೂ ಒಟ್ಟಿಗೇ ತೆಪ್ಪೋತ್ಸವಗಳು ನಡೆಯುತ್ತವೆ. ಇದರಿಂದ ಇದೊಂದು ಸಹಜವಾಗಿಯೇ ಹರಿ – ಹರರ ಕ್ಷೇತ್ರವಾಗಿದೆ.

ದೇವಾಲಯವು ನಗರದ ಹೊರಭಾಗದಲ್ಲಿ ಪ್ರಶಾಂತ ವಲಯದಲ್ಲಿ ಇರುವುದರಿಂದ, ನಗರದ ಜನ ಜಂಗುಳಿಯಲ್ಲಿ ಬಳಲಿದವರು ವಿಹಾರಾರ್ಥವಾಗಿ ಹೋಗಿ, ಒಂದು ದಿನ ಸಂತೋಷವಾಗಿ ಭಗವದ್ ಕೀರ್ತನೆಯಲ್ಲಿ ಕಳೆಯಲು ಇದು ಸೂಕ್ತವಾಗಿದೆ. ಅನೇಕರು ಇಲ್ಲಿ ಶುಭ ಕಾರ್ಯಗಳನ್ನು ನೆರವೇರಿಸುತ್ತಾರೆ. ಸೌಕರ್ಯ ಕಡಿಮೆ ಇರುವುದರಿಂದ ಹೆಚ್ಚು ಜನರು ಇಲ್ಲಿ ತಂಗಲು ಅನಾನುಕೂಲವಾಗುವುದು. ಪ್ರವಾಸೋದ್ಯಮ ಇಲಾಖೆಯವರು ಈ ಕ್ಷೇತ್ರವನ್ನು ಆದಷ್ಟು ಬೇಗ ಗುರುತಿಸಿ, ಸೂಕ್ತವಾದ ಕ್ರಮಗಳನ್ನು ಕೈಗೊಂಡು, ಭಕ್ತಾದಿಗಳಿಗೆ ಹೆಚ್ಚು ಸೌಕರ್ಯವನ್ನುಂಟುಮಾಡಲಿ ಶ್ರೀ ಶಂಖ ಚಕ್ರ ಗದಾಧಾರಿಯಾದ ಶ್ರೀ ವಸಂತ ವಲ್ಲಭ ರಾಯ ಸ್ವಾಮಿಯ ಕೃಪೆಯಿಂದ ಸನ್ಮಾರ್ಗದಲ್ಲಿ ಸರ್ವರಿಗೂ ದೊರಕುವಂತಾಗಲಿ.

---

# ಆರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸೌಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸಲ್ಪಟ್ಟ ಆರ್ಜಿತೋತ್ಸವ, ಈ ಪ್ಲವೋತ್ಸವ.

ಪ್ರತಿ ಮಂಗಳವಾರದಲ್ಲಿ, ಆರ್ಜಿತಸೇವೆಗಳನಂತರ, ಮಲಯಪ್ಪಸ್ವಾಮಿಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ, ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ.

ಈ ಮೂರು ಪ್ರದಕ್ಷಿಣೆಗಳ ಅನಂತರ ನಿವೇದನ; ಮಂಗಳ ನೀರಾಜನ ನಡೆದು ಸ್ವಾಮಿಯವರು ದೇವೇರಿಗಳು ವಿವಿಧ ಮರ್ಯಾದೆಗಳೊಡನೆ ಆಲಯ ಪ್ರವೇಶ ಮಾಡುತ್ತಾರೆ.

ರೂ. 2500 ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಿಲ ಮೇಲಿದ್ದು ನೋಡಬಹುದು. ಗೃಹಸ್ಥರಿಗೆ ವಸ್ತ್ರ ಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿವುಳ್ಳ 5 ಗ್ರಾಂ ತೂಕದ ಬಂಗಾರದ ಪದಕ ಕೊಡಲ್ಪಡುತ್ತದೆ, ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಅನುಮತಿಸಲಾಗುತ್ತದೆ.

ತಿರುಮಲೆ ತಿರುಪತಿ ದೇವಸ್ಥಾನ.

# ರಾಜಕಾರಣಿ ಶ್ರೀಕೃಷ್ಣ

ಪರಿತ್ರಾಣಾಯ ಸಾಧೂನಾಂ
ವಿನಾಶಾಯ ಚ ದುಷ್ಕೃತಾಂ |
ಧರ್ಮಸಂಸ್ಥಾಪನಾರ್ಥಾಯ
ಸಂಭವಾಮಿ ಯುಗೇ ಯುಗೇ ||

—ಎಂದು ಶ್ರೀಮನ್ನಾರಾಯಣನು ಭೂಲೋಕದಲ್ಲಿ ಆವಿರ್ಭವಿಸುವ ಕಾಲವನ್ನು ಗೀತೆಯು ಸ್ಪಷ್ಟಪಡಿಸಿದೆ. ಕೃಷಿಕ್ಷೇತ್ರದಲ್ಲಿ ಪೂರ್ಣಫಲವು ಲಭಿಸಬೇಕಾದರೆ ಕಳೆಗಳನ್ನು ಕಿತ್ತು ಕ್ಷೇತ್ರವನ್ನು ಶುದ್ಧಿಗೊಳಿಸಿ ಫಲ ಪ್ರಾಪ್ತಿಗೆ ಪ್ರಯತ್ನಿಸುವಂತೆ ದುಷ್ಟರನ್ನು ಕಿತ್ತೊಗೆದ ಬಳಿಕವೇ ಸನ್ಮಾರ್ಗಗಾಮಿಗಳಿಗೆ ಪೂರ್ಣಫಲ ಪ್ರಾಪ್ತಿಗೆ ಅವಕಾಶವಾಗುತ್ತದೆ. ದುಷ್ಟರು ಕಳೆಗಳಂತೆ ಸತ್ಫಲ ಪ್ರಾಪ್ತಿಗೆ ಅಡಚಣೆ ತರುವವರು. ಇಂತಹವರನ್ನು ಸಂಹರಿಸುವುದಕ್ಕಾಗಿ ಶ್ರೀಮನ್ನಾರಾಯಣನು ಯುಗಯುಗಗಳಲ್ಲೂ ಭೂಲೋಕದಲ್ಲಿ ಅವತರಿಸಿ ದುಷ್ಟರನ್ನು ನಿಗ್ರಹಿಸುತ್ತಾನೆ. ಈ ವಿಧವಾದ ಭಗವಂತನ ಅವತಾರಗಳಲ್ಲಿ ವರಾಹ, ನೃಸಿಂಹ, ಶ್ರೀರಾಮ ಹಾಗೂ ಶ್ರೀಕೃಷ್ಣ ಈ ನಾಲ್ಕು ಅವತಾರ ರೂಪಗಳು ಪ್ರಮುಖ.

ಹೀಗೆ ಪ್ರಶಸ್ತವಾದ ಮುಖ್ಯಾವತಾರಗಳ ಪೈಕಿ ಕೊನೆಯದಾದ ಶ್ರೀ ಕೃಷ್ಣಾವತಾರವು ವಿಷ್ಣುವಿನ ಪೂರ್ಣಾವತಾರವಾದುದರಿಂದ ಅದು ಹೆಚ್ಚು ಪ್ರಾಮುಖ್ಯತೆಗೆ ಬಂದಿದೆ. ಈ ಅವತಾರದಲ್ಲಿ ನಡೆದಿರುವ ಘಟನೆಗಳ ಸಾಹಿತ್ಯದಿಂದ ಶ್ರೀ ಕೃಷ್ಣನು ಈ ತನ್ನ ಭೂಲೋಕವಾಸ ಸಮಯದಲ್ಲಿ ದೊಡ್ಡ ರಾಜಕಾರಣಿಯಾಗಿದ್ದಾನೆ ಎಂದು ತಿಳಿದುಬರುತ್ತದೆ.

ಶ್ರೀಕೃಷ್ಣ ಹುಟ್ಟುವಾಗಲೇ ಸಮಸ್ಯೆ ಮಾತಾ ಪಿತೃಗಳಿಗೆ. ಅದರ ಪರಿಹಾರ ಯಾರಿಂದ? ಆಗತಾನೆ ಹುಟ್ಟಿದ ಮಗುವಾದ ಶ್ರೀಕೃಷ್ಣನಿಂದಲ್ಲವೇ? ಈತನ ಜನನ ಶ್ರಾವಣ ಮಾಸದ ಕೃಷ್ಣಾಷ್ಟಮಿ ರೋಹಿಣಿ ನಕ್ಷತ್ರ, ಮಧ್ಯರಾತ್ರಿ, ಮಳೆಗಾಲದಲ್ಲಿ. ಕೃಷ್ಣಾಷ್ಟಮಿ ಎಂದ ಮೇಲೆ ಅರ್ಧರಾತ್ರಿಯಲ್ಲಿ ಕಗ್ಗತ್ತಲು. ಚಂದ್ರೋದಯವಾಗಿ ಬೆಳಕನ್ನು ಬೀರುವಂತೆ, ಅಜ್ಞಾನಾಂಧಕಾರದಿಂದ ಆವೃತವಾದ ಈ ಲೋಕಕ್ಕೆ ಚಂದ್ರೋದಯವಾದಂತೆ ದೀಪಪ್ರಾಯನಾಗಿ ಅಜ್ಞಾನವೆಂಬ ತಮಸ್ಸನ್ನು ಹರಿಸಿದ್ದಾನೆ. ತನ್ನ ತಾಯಿಯಾದ ದೇವಕಿ, ತಂದೆಯಾದ ವಸುದೇವ ನ—[illegible] ತಾನು ಭಗವಂತನೇ ಎಂದು. ತೋರ್ಪಡಿಸಿ ಅವರಿಷ್ಟ ಭಾರವನ್ನು ನಿವಾರಿಸುತ್ತಾನೆ. ಇದು ತಂತ್ರವಲ್ಲವೇ? ಒಳಿಕ ತಂದೆಗೆ ಶೃಂಖಲೆಯ ಬಂಧ ಹೋಗಿ ಕಾರಾಗೃಹದ ಬಾಗಿಲು ತೆರೆದು ಹೊರಗೆ ಬಂದಾಗ ಮಳೆ ತನ್ನ ಮೇಲೆ ಬೀಳದಂತೆ ಎಚ್ಚರಿಕೆ, ಪ್ರವಾಹದಿಂದ ಉಬ್ಬಿರುವ ಯಮುನಾ ನದಿಯನ್ನು ದಾಟಲು ನದಿಯೇ ದಾರಿ ಬಿಡುವುದು, ಗೋಕುಲದ ನಂದಗೋಪನ ಪತ್ನಿಗೆ ನಿದ್ರೆ, ಆ ಸ್ತ್ರೀ ಶಿಶುವಿನ ಪ್ರತಿಕೂಲಾಗಿ ತಾನಿದ್ದು. ತನ್ನಸ್ಥಾನದಲ್ಲಿ ಆ ಶಿಶುವನ್ನು ಇಟ್ಟುಕೊಳ್ಳುವಂತೆಲ್ಲ ಆದುದು ಶ್ರೀ ಕೃಷ್ಣನ ತಂತ್ರದಿಂದಲ್ಲವೇ? ಇದಾದ ಒಳಿಕ ಕಂಸನಿಗೆ ಎಚ್ಚರಿಕೆ ಕೊಡುವಂಥ ಪ್ರಸಂಗಗಳು. ಪೂತನಿಯ ವಧೆ, ಬಕಾಸುರ ವಧೆ, ವೃಕಾಸರ ವಧೆ ಇವೇ ಮೊದಲಾದ ಅಸುರರ ವಧೆ ಪುಟ್ಟ ಬಾಲಕನಿಂದ. ಇದು ಸಾಮಾನ್ಯವಾದ ತಂತ್ರವೇ? ಇಷ್ಟೇ ಅಲ್ಲ ಗೋವರ್ಧನ ಗಿರಿಯ ಉದ್ಧರಣ, ಕಂಸನ ಸಂಹಾರ, ಜರಾಸಂಧನ ವಧೆ ಮತ್ತು ಉಗ್ರಸೇನನಿಗೆ ಪಟ್ಟ- ಇವು ರಾಜತಂತ್ರಜ್ಞನಾದ ಶ್ರೀಕೃಷ್ಣನಿಗಲ್ಲದೆ ಮತ್ತಾರಿಗೆ ಸಾಧ್ಯ? ಇಷ್ಟೇ ಏಕೆ, ಕೃಷ್ಣನ ಮದುವೆ ಕೂಡ ತಂತ್ರದಿಂದಲೇ ಆದುದಲ್ಲವೇ? ತಾನು ಮಾತ್ರವಲ್ಲ ತನ್ನ ತಂಗಿಯಾದ ಸುಭದ್ರೆಯ ಮದುವೆಗೂ ರಾಜತಂತ್ರ. ಇವೆಲ್ಲಕ್ಕಿಂತ ಪೂರ್ಣವಾದ ರಾಜಕಾರಣಿಯ ಕೆಲಸ ಭಾರತದ ಉದ್ಯೋಗ ಪರ್ವದಿಂದ ಮುಂದಿನ ಪರ್ವಗಳಲ್ಲಿ ಕಾಣಬಹುದು. ಈ ಹಿಂದಿನ ಪ್ರಕರಣಗಳಿಂದ ಶ್ರೀಕೃಷ್ಣ ರಾಜಕಾರಣಿ ಎಂದು ಹೇಳಲು ಒಂದು ವೇಳೆ ಹಿಂಜರಿದರೂ ಭಾರತ ಯುದ್ಧದಲ್ಲಿ ಶ್ರೀಕೃಷ್ಣನ ರಾಜತಂತ್ರವಿಲ್ಲದ ಪ್ರಕರಣವಿಲ್ಲ. ಆವನ ತಂತ್ರ ಸೇನೆಯ ಉದ್ಯೋಗದಿಂದಲೇ ಆರಂಭವಾಗುತ್ತದೆ. ತಾನು ಪಾಂಡವರ ಕಡೆಗೇ ಸೇರಬೇಕು, ಆದರೆ ಪ್ರತ್ಯಕ್ಷವಾಗಿ ಯುದ್ಧ ಮಾಡಬಾರದು, ತನ್ನ ಸಹಾಯವನ್ನು ಪ್ರಾರ್ಥಿಸಿ ಬಂದ ದುರ್ಯೋಧನನನ್ನು ಮೊದಲು ನೋಡದೆ ಅರ್ಜುನನನ್ನು ಮೊಟ್ಟಮೊದಲಾಗಿ ಕಂಡು ಅರ್ಜುನನು ತನ್ನನ್ನೇ ಸ್ವೀಕರಿಸುವಂತೆ ಏರ್ಪಡಿಸಿದ ಸನ್ನಿವೇಶ. ಇದಾದ ಮೇಲೆ ಸಂಧಿಗಾಗಿ ತಾನು ಹಸ್ತಿನಾವತಿಗೆ ಹೋದರೂ, ಯುದ್ಧಕ್ಕೆ ಬೆಂಬಲ. ಸಂಧಿ ಮುರಿದು ಬಿದ್ದ ಮೇಲೆ ದುರ್ಯೋಧನನಿಗೆ ಬಲಗೈಯಾದ ಕರ್ಣನನ್ನು ಆತನಿಂದ ಬೇರ್ಪಡಿಸುವ ಸಂಧಾನ, ಅದಕ್ಕೆ ತನ್ನ ಪ್ರಯತ್ನ ಮಾತ್ರವಲ್ಲದೆ ಕುಂತಿಯನ್ನೂ ಪ್ರೇರಿಸಿ ಕರ್ಣನಿಂದ ಅರ್ಜುನನನ್ನು ಬಿಟ್ಟು ಇತರರ ರಕ್ಷಣೆ (ತಾನೇ ಅರ್ಜುನನಿಗೆ ಸಾರಥಿಯಾಗಿ ರಕ್ಷಕನಾಗಿರುವಾಗ ಕರ್ಣನ ಭಯ ಅರ್ಜುನನಿಗೇಕೆ?)- ಇವು ಮಾತ್ರವಲ್ಲ, ಭೀಷ್ಮನ ವಧೆ, ದ್ರೋಣನ ವಧೆ ಕರ್ಣನ ವಧೆ, ಕೊನೆಗೆ ದುರ್ಯೋಧನನ ವಧೆ-ಇವೆಲ್ಲಕ್ಕೂ ಕೃಷ್ಣನೇ ಮೂಲವಾದ ರಾಜಕಾರಣಿಯೆನಿಸುತ್ತಾನಲ್ಲವೇ? ಈತನ ರಾಜತಂತ್ರವಿಲ್ಲದಿದ್ದರೆ ಭಾರತದ ಯುದ್ಧದ ಅಂತ್ಯಜಯ ಏನಾಗುತ್ತಿತ್ತೋ! "ತನ್ನ ನಂಬಿದವರಿಗೆ ತನುವ ತೆತ್ತಿಹನೆಂಬ'' ಕುಮಾರವ್ಯಾಸನ ನುಡಿ ಸತ್ಯವಾದುದಲ್ಲವೇ! ತನ್ನ ಭಕ್ತರಾದ ಪಾಂಡವರಿಗೆ ತನ್ನನ್ನೇ ತೆತ್ತು, ಆ ಭಕ್ತರನ್ನು ಉದ್ಧರಿಸಿದನಲ್ಲದ, ಅವರ ಉದ್ಧಾರಕಾಗಿಯೇ ತನ್ನೆಲ್ಲಾ ರಾಜತಂತ್ರಗಳನ್ನು ಬಳಸಿದವನು ಶ್ರೀಕೃಷ್ಣ.

ವಿಷ್ಣುವಿನ ಉಳಿದ ಅವತಾರಗಳಲ್ಲಿ ಎಲ್ಲದಕ್ಕಿಂತಲೂ ಮುಖ್ಯವಾದ ದೃಷ್ಟಿ ಶಾಪಗ್ರಸ್ತರಾಗಿ ರಾಕ್ಷಸರಾಗಿ ಜನ್ಮತಳೆದ ಸಹೋದರರ ಸಂಹಾರ ಮಾತ್ರ. ಶ್ರೀ ಕೃಷ್ಣಾವತಾರದಲ್ಲೂ ಅದೇ ಧ್ಯೇಯವಾದರೂ ಅದರ ವಿವರ ಪ್ರಮುಖವಾಗಿರದೆ, ಶ್ರೀಕೃಷ್ಣನ ತಂತ್ರಗಳೇ ಮುಖ್ಯವಾಗಿ ಎದ್ದು ತೋರುತ್ತಿರುವುದರಿಂದ ಮುಖ್ಯಧ್ಯೇಯವಾದ ಭೂಭಾರ ನಿವಾರಣೆಯನ್ನೇ ಮುಂದಿಟ್ಟುಕೊಂಡು ಅದಕ್ಕನುಗುಣವಾದ ತಂತ್ರಗಳನ್ನು ಬಳಸಿ ಭೂಲೋಕವನ್ನು ನಿಷ್ಕಂಟಕವನ್ನಾಗಿ ಮಾಡಿದ್ದಾನೆ ಆತ. ಇದೇ ಈ ರಾಜತಂತ್ರದಿಂದ ಕೂಡಿದ ಅವತಾರದ ಮುಖ್ಯ ಗುರಿಯೂ ಆಗಿ ಕಂಡು ಬರುತ್ತದೆ. ★

ಎಸ್. ಜಯಸಿಂಹ, ಎಂ.ಎ.

# ಕೆಲವು ಸುಭಾಷಿತಗಳು

ಮಂತ್ರಿಸಿದರೆ ಮಾವಿನಕಾಯಿ ಉದುರುತ್ತದೆಯೆ? ಕಲ್ಲು ಹೊಡೆಯಬೇಕು; ಇಲ್ಲವೇ ಮರಹತ್ತಿ ಕೀಳಬೇಕು ಹಾಗೆಯೇ, ಪುರುಷಪ್ರಯತ್ನವಿಲ್ಲದೆ ಕೇವಲ ಅದೃಷ್ಟವನ್ನು ನಂಬಿ ಕುಳಿತರೆ ಯಾವ ಕೆಲಸವೂ ಕೈಗೂಡುವುದಿಲ್ಲ. ಪ್ರಾರಂಭಿಸಿದ ಕೆಲಸವನ್ನು ಪೂರೈಸುತ್ತೇನೆಂಬ ದೃಢನಿಶ್ಚಯದಿಂದ ಕೆಲಸದಲ್ಲಿ ತೊಡಗುವ ಶ್ರದ್ಧಾಳು ನಿಶ್ಚಿತ ಗುರಿಯನ್ನು ಬಹುಬೇಗ ತಲಪುತ್ತಾನೆ

ಪ್ರಾರಭ್ಯತೇ ನ ಖಲು ವಿಘ್ನ ಭಯೇನ
ನೀಚೈಃ
ಪ್ರಾರಭ್ಯ ವಿಘ್ನನಿಹತಾ ವಿರಮಂತಿ ಮಧ್ಯಾಃ ।
ವಿಘ್ನೈಃ ಪುನಃ ಪುನರಪಿ ಪ್ರತಿಹನ್ಯಮಾನಾಃ
ಪ್ರಾರಬ್ಧಮುತ್ತಮಜನಾ ನ ಪರಿತ್ಯಜಂತಿ ॥

'ವಿಘ್ನಗಳಿಗೆ ಹೆದರಿ ಅಧಮರು ಕೆಲಸವನ್ನು ಪ್ರಾರಂಭಿಸುವುದೇ ಇಲ್ಲ. ಮಧ್ಯಮರು ಕೆಲಸವನ್ನೇನೋ ಆರಂಭಿಸುತ್ತಾರೆ. ಆದರೆ ವಿಘ್ನಗಳು ತಲೆದೋರಿದಾಗ ಪ್ರಾರಂಭಿಸಿದ ಕೆಲಸವನ್ನು ಕೈಬಿಡುತ್ತಾರೆ ಉತ್ತಮರು ವಿಘ್ನಪರಂಪರೆಗೆ ಹೆದರದೆ, ಮತ್ತೆ ಮತ್ತೆ ವಿಘ್ನಗಳು ಬಂದೆರಗಿದರೂ ಹಿಂದೆಗೆಯದೆ ಪ್ರಾರಂಭಿಸಿದ ಕೆಲಸವನ್ನು ಪೂರೈಸುತ್ತಾರೆ ಎನ್ನುತ್ತಾನೆ ಭರ್ತೃಹರಿ

"ಏಳಿ, ಎಚ್ಚರಗೊಳ್ಳಿ, ಗುರಿ ಮುಟ್ಟುವತನಕ ನಿಲ್ಲದಿರಿ" ಎನ್ನುವ ವಿವೇಕಾನಂದರು ಧೈರ್ಯದಿಂದ ಮುನ್ನುಗ್ಗಿ ಕೆಲಸವನ್ನು ಸಾಧಿಸಲು ಕರೆ ನೀಡಿದ್ದಾರೆ.

"ಈಪ್ಸಿತಾರ್ಥ ಪ್ರಸಿದ್ಧ್ಯರ್ಥಂ ನರಃ
ಪುರುಷ ನಿಷ್ಣಾತೋ ಮುಖಂ ಪ್ರತಿಃಯೇತ್"

ಇಷ್ಟಾರ್ಥ ಪಡೆಯಬೇಕೆಂದು ದೃಢನಿಶ್ಚಯ ಮಾಡಿದ ಮನಸ್ಸನ್ನೂ, ಹಳ್ಳದಕಡೆ ಹರಿಯುತ್ತಿರುವ ನೀರನ್ನೂ ಹಿಂತಿರುಗಿಸಬಲ್ಲ ಸಾಮರ್ಥ್ಯ ಯಾರಿಗಿದೆ? ಯಾವುದೇ ಕೆಲಸವನ್ನು ಪ್ರಾರಂಭಿಸುವ ಮೊದಲು ಪೂರ್ವಾಪರ ವಿವೇಚನೆಮಾಡಿ ಸರಿಯಾಗಿ ಪ್ರಾರಂಭಿಸಬೇಕು. ಪ್ರಥಮ ಪ್ರಯತ್ನದಲ್ಲೇ ಯಶಸ್ಸು ಕರಗತವಾಗದಿರಬಹುದು; ಆದರೆ ವಿಫಲತೆಗೆ ಕಾರಣವೇನೆಂಬುದರ ಅರಿವಾಗುತ್ತದೆ. ಅದನ್ನು ಸರಿಮಾಡಿ ಮರಳಿ ಯತ್ನವ ಮಾಡಿದರೆ ನಿಸ್ಸಂಶಯವಾಗಿ ಯಶಸ್ಸು ಕರಗತವಾಗುತ್ತದೆ "ಸೋಲು ಗೆಲುವಿನ ಸೋಪಾನ" ಎಂಬುದನ್ನು ಸ್ಪಷ್ಟಪಡಿಸುತ್ತದೆ.

* * * *

"ವಿದ್ಯಾ ತಪೋ ವಾ ವಿಪುಲಂ ಧನಂ ವಾ
ಸರ್ವಂ ಹ್ಯೇತದ್ವ್ಯವಸಾಯೇನ ಶಕ್ಯಂ"

ವಿದ್ಯೆಯಾಗಲಿ ತಪಸ್ಸಾಗಲಿ ಹೆಚ್ಚು ಹಣವಾಗಲಿ ಎಲ್ಲವೂ ಉದ್ಯಮದಿಂದ ಮಾತ್ರ ಸಾಧ್ಯ. ಕೆಲಸ ಕೈಗೂಡುವುದು ಪ್ರಯತ್ನದಿಂದ; ಪರಿಶ್ರಮದಿಂದ. ಕೇವಲ ಮನೋರಥದಿಂದಲ್ಲ ನಿದ್ರಿಸುತ್ತಿರುವ ಸಿಂಹದ ಬಾಯೊಳಕ್ಕೆ ಮೃಗಗಳು ತಾವಾಗಿಯೇ ಪ್ರವೇಶಿಸುವುದಿಲ್ಲ. ಪುರುಷಪ್ರಯತ್ನ ಮಾಡದೆ ದೇವರಮೇಲೆ ಭಾರಹಾಕಿ ಕುಳಿತರೆ ಏನೂ ಪ್ರಯೋಜನವಿಲ್ಲ

'ಉದ್ಯಮಂ ಸಾಹಸಂ ಧೈರ್ಯಂ
ಬುದ್ಧಿಃ ಶಕ್ತಿಃ ಪರಾಕ್ರಮಃ ।
ಷಡೇತೇ ಯತ್ರ ವರ್ತಂತೇ
ತತ್ರ ದೇವಃ ಸಹಾಯಕೃತ್" ॥

ಉದ್ಯಮ, ಸಾಹಸ, ಧೈರ್ಯ, ಬುದ್ಧಿ, ಶಕ್ತಿ, ಪರಾಕ್ರಮ ಇವು ಎಲ್ಲಿರುತ್ತವೋ ಅಲ್ಲಿ ದೇವರೂ ಸಹಾಯಕ್ಕೆ ಒದಗುತ್ತಾನೆ

ಉಜ್ಜಿದರೆ ಕಟ್ಟಿಗೆಯಿಂದಲೂ ಬೆಂಕಿ ಬರುತ್ತದೆ. ಅಗೆದರೆ ಭೂಮಿಯಲ್ಲೂ ನೀರಿನ ಸೆಲೆ ಸಿಕ್ಕುತ್ತದೆ ಉತ್ಸಾಹಶೀಲರಾದ ಜನರಿಗೆ ಅಸಾಧ್ಯವಾದ ಕೆಲಸವೇ ಇಲ್ಲ. ಆತ್ಮವಿಶ್ವಾಸದಿಂದ ಪ್ರಾರಂಭಿಸಿದ ಕೆಲಸ ಈಡೇರುತ್ತದೆ. ಉದ್ಯೋಗಶೀಲನಾದ ಮನುಷ್ಯ ಅದೃಷ್ಟವನ್ನು ನಂಬಿ ಎಂದಿಗೂ ಕೈ ಕಟ್ಟಿ ಕುಳಿತುಕೊಳ್ಳುವುದಿಲ್ಲ. ಕಣ್ಣಿಗೆ ಕಾಣದ ಅದೃಷ್ಟಕ್ಕಿಂತ ತನ್ನ ಕೈಯಲ್ಲಿರುವ ಸ್ವಶಕ್ತಿಯಲ್ಲಿ ನಂಬಿಗೆಯಿರಿಸಿ ಕಾರ್ಯತತ್ಪರನಾಗುತ್ತಾನೆ. ಅಂತಹವನಿಗೆ ಲಕ್ಷ್ಮಿ ತಾನಾಗಿಯೇ ಒಲಿಯುತ್ತಾಳೆ

"ಕರ್ಮಣ್ಯೇವಾಧಿಕಾರಸ್ತೇ
ಮಾ ಫಲೇಷು ಕದಾಚನ"

ಎಂದಿರುವ ಗೀತಾಚಾರ್ಯ ಫಲಾಪೇಕ್ಷೆಯಿಲ್ಲದೆ ಸದಾ ಕರ್ತವ್ಯನಿರತರಾಗಿ ಬಾಳಲು ಕರೆ ಕೊಟ್ಟಿದ್ದಾನೆ ಅಂತಹವರಿಗೆ ಒಂದಕ್ಕೆ ಹತ್ತರಷ್ಟು ಫಲ ದೊರಕುವುದರಲ್ಲಿ ಸಂಶಯವಿಲ್ಲ.

* * * *

ಸಂಸಾರ ವಿಷವೃಕ್ಷಸ್ಯ ದ್ವೇ ಏವ ರಸವತ್ಫಲೇ
ಕಾವ್ಯಾಮೃತ ರಸಾಸ್ವಾದಃ ಸಂಗಮಃ
ಸಜ್ಜನೈಸ್ಸಹ ।"

ಸಂಸಾರವೆಂಬ ವಿಷವೃಕ್ಷದ ಮಧುರ ಫಲಗಳು ಎರಡೇ ಎರಡು. ಕಾವ್ಯಾಮೃತದ ಸವಿ ಒಂದು, ಸಜ್ಜನರ ಸಂಗ ಮತ್ತೊಂದು ಒಬ್ಬ ವ್ಯಕ್ತಿ ಎಂಥವನು, ಆತನ ಅಭಿರುಚಿ ಎಂಥದ್ದು ಎಂಬುದಕ್ಕೆ ಆತನ ಸಹವಾಸ ಹಾಗೂ ಆತ ಓದುವ ಪುಸ್ತಕಗಳು ಕೈಗನ್ನಡಿಯಾಗುತ್ತವೆ. ರಸವತ್ತಾದ ಕಾವ್ಯವೊಂದನ್ನು ಓದುತ್ತ ಹೋದಂತೆ ನಮ್ಮ ಬೇಸರವೆಲ್ಲ ಕಳೆದು, ರಸಾಸ್ವಾದನದಲ್ಲಿ ನಮ್ಮ ಮನ ತಲ್ಲೀನವಾಗುತ್ತದೆ. ಅದೇ ಕಾವ್ಯವನ್ನು ಮತ್ತೆ ಮತ್ತೆ ಓದಿದಷ್ಟೂ ಹೊಸ ಅರ್ಥಗಳು ಸ್ಫುರಿಸಿ ಅದರ ಸವಿ ಮತ್ತಷ್ಟು ಹೆಚ್ಚುತ್ತದೆ. ನಮ್ಮ ಮನಸ್ಸಿಗೆ ಆನಂದವಾಗುವುದು ಮಾತ್ರವಲ್ಲದೆ ನಾವು ಅನೇಕ ಉಪ



ಆನಿವರ ಆಸ್ಥಾನದಲ್ಲಿ ನೂತನ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿಯವರು.

ಯುಕ್ತ ವಿಷಯಗಳನ್ನು ತಿಳಿದುಕೊಂಡಂತಾಗುತ್ತದೆ ಆದ್ದರಿಂದಲೇ "No entertainment is so cheap as reading nor any pleasure so lasting" ಎಂಬ ಉದ್ಗಾರ ಹೊರಟದೆ ಓದುಗಾರಿಕೆ ಎಂಬ ಮನರಂಜನೆ ಸುಲಭ ಬೆಲೆಗೆ ದೊರಕುತ್ತದಲ್ಲದೆ ಅದರಿಂದ ದೊರಕುವ ಸಂತಸ ಬಹುಕಾಲ ನಿಲ್ಲುತ್ತದೆ. ಅಂತೆಯೇ ಸತ್ಸಂಗ, ಸತ್ಸಹವಾಸ ದಿನ ದಿನಕ್ಕೂ ವರ್ಧಿಸುತ್ತ ಹೋಗುತ್ತದೆ. ಸಮಾನ ಅಭಿರುಚಿಯುಳ್ಳವರು ಒಂದೆಡೆ ಕಲೆತು, ವಿಷಯ ವಿನಿಮಯ ಮಾಡಿಕೊಂಡಾಗ ಸಹಜವಾಗಿ ಅವರ ಜ್ಞಾನ ಭಂಡಾರ ವಿಸ್ತೃತವಾಗುತ್ತದೆ, ಸ್ನೇಹ ವರ್ಧಿಸುತ್ತದೆ.

ಚಿನ್ನದ ಸಂಸರ್ಗದಿಂದ ಕಾಗೆ ಬಂಗಾರವೂ ಮರಕತದ ಕಾಂತಿಯನ್ನು ಪಡೆದು ಕಂಗೊಳಿಸುವಂತೆ ಸತ್ಪುರುಷರ ಸಂಗದಿಂದ ಮೂರ್ಖನೂ ಪ್ರವೀಣನಾಗುತ್ತಾನೆ. ನಮ್ಮ ನಡವಳಿಕೆ ಉತ್ತಮ ಅಥವಾ ಅಧಮವಾಗಿರಲು ಕಾರಣ ನಮ್ಮ ಸಹವಾಸಿಗಳ ಗುಣ ಅಥವಾ ದೋಷ ಎಂಬುದನ್ನು ಸಾದರಪಡಿಸುವ ಕಥೆಯೊಂದು ನಮ್ಮಲ್ಲಿ ಪ್ರಚಲಿತವಾಗಿದೆ. ಒಬ್ಬ ಎರಡು ಗಿಣಿಮರಿಗಳನ್ನು ಮಾರಲು ಹೊರಟ. ಋಷಿಕುಮಾರನೊಬ್ಬ ಒಂದು ಗಿಣಿಯನ್ನು ಕೊಂಡುಕೊಂಡರೆ, ಕಟುಕನೊಬ್ಬ ಮತ್ತೊಂದನ್ನು ಕೊಂಡ. ಸ್ವಲ್ಪಕಾಲಾನಂತರ ಗಿಣಿಗಳನ್ನು ಮಾರಿದವನಿಗೆ ಅವು ಹೇಗಿವೆ ಎಂದು ನೋಡುವ ಆಸೆಯಾಯಿತು ಆತ ಕಟುಕನ ಮನೆಬಳಿ ಬರುತ್ತಿದ್ದಂತೆಯೇ ಅಲ್ಲಿದ್ದ ಗಿಣಿ "ಹಿಡಿ, ಕೊಲ್ಲು, ಕೊಚ್ಚು" ಎಂದು ಕಿರಿಚತೊಡಗಿತು ಅಲ್ಲಿಂದ ಕಾಲ್ತೆಗೆದ ವ್ಯಾಪಾರಿ ಋಷ್ಯಾಶ್ರಮದ ಬಳಿ ಬಂದ. ದೂರದಲ್ಲಿ ಆತನ ಬರವನ್ನು ಕಂಡ ಗಿಣಿಮರಿ ಆದರದಿಂದ ಆತನಿಗೆ ಸ್ವಾಗತ ಬಯಸಿತು. "ಬಳಲಿ ಶ್ರಮಪಟ್ಟು ಇಲ್ಲಿಗೆ ಬಂದಿದ್ದೀರಿ. ದಯವಿಟ್ಟು ಕುಳಿತುಕೊಳ್ಳಿ ಹಾಲು ಹಾಲು ಹಣ್ಣು ಸ್ವೀಕರಿಸಿ" ಎಂದು ಉಪಚರಿಸಿತು. ಒಂದೇ ತಾಯ ಬಸಿರಿನಿಂದ ಬಂದ ಗಿಣಿಗಳ ನಡವಳಿಕೆಯಲ್ಲಿ ಇಂತಹ ವ್ಯತ್ಯಾಸ ಕಂಡುಬಂದ ಬಗ್ಗೆ ಅಚ್ಚರಿಗೊಂಡ ವ್ಯಾಪಾರಿ ಋಷಿಗಳನ್ನು ಅದಕ್ಕೆ ಕಾರಣವೇನೆಂದು ಕೇಳಿದ. ಅವರು– "ಗಿಣಿಗಳ ನಡವಳಿಕೆಯ ಬಗ್ಗೆ ಆಶ್ಚರ್ಯಪಡುವುದೇನಿದೆ ? ಕಟುಕನ ಬಳಿ ಬೆಳೆದ ಗಿಣಿ ದಿನ ಬೆಳಗಾದರೆ ತನ್ನ ಕಾಯಕನ ಬಗ್ಗೆ ಕಟುಕ ಆಡುವ ಮಾತನ್ನು ಕೇಳಿ ಅದನ್ನೇ ಕಲಿತಿದೆ. ಋಷಿಪುತ್ರರು ಆಗಂತುಕರೊಡನೆ ಆಡುವ ಸವಿಮಾತನ್ನು ಈ ಗಿಣಿ ಕಲಿತಿದೆ" ಎಂದರು.

"ಸಗಣಿಯವನ ಕೂಡೆ ಸರಸಕ್ಕಿಂತ ಶ್ರೀಗಂಧದವನೊಡನೆ ಗುದ್ದಾಡುವುದು ಲೇಸು." ಎಂಬ ಗಾದೆಮಾತು, ಸಜ್ಜನರೊಡನೆ ಜಗಳವಾಡಿದರೂ ನಮಗೆ ಲಾಭವಿದೆ, ದುರ್ಜನರ ಸಂಗ ಸರ್ವಥಾ ಸಲ್ಲದು ಎಂಬುದನ್ನು ಸಾದರಪಡಿಸುತ್ತದೆ. ಹೂವು ತನ್ನನ್ನು ಹಿಸುಕಿ, ಹಿಂಡಿ ಹಾಕಿದ ಕೈಗೂ ಘಮಘಮಿಸುವ ಪರಿಮಳವನ್ನು ನೀಡುತ್ತದೆ. ತನ್ನನ್ನು ಅರೆದು ಕೃಶವಾಗಿಸಿದರೂ ಶ್ರೀಗಂಧ ಸುಗಂಧ ಬೀರುತ್ತದೆ ಅಂತೆಯೇ ಸತ್ಪುರುಷರು ತಮಗೆ ಕೆಡಕು ಬಯಸಿದವರಿಗೂ ಒಳ್ಳೆಯದನ್ನೇ ಮಾಡುತ್ತಾರೆ

"ನಹಿ ಕಲ್ಯಾಣ ಕೃತ್ಕಶ್ಚಿತ್
ದುರ್ಗತಿಂ ತಾತಗಚ್ಛತಿ

ಒಳ್ಳೆಯ ಕೆಲಸವನ್ನು ಮಾಡುವವನು ಯಾವಾಗಲೂ ದುರ್ಗತಿಯನ್ನು ಹೊಂದುವುದಿಲ್ಲ ಎಂದು ಭಾವಿಸಿ ಸತ್ಪುರುಷರು ಸದಾ ಪರೋಪಕಾರ ಮಾಡುವುದರಲ್ಲಿ ನಿರತನಾಗಿರುತ್ತಾರೆ. "ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ" ಪರಿಚಯ ಹೆಚ್ಚಿದಷ್ಟೂ ಸ್ನೇಹ ಹೆಚ್ಚುತ್ತ, ಸ್ನೇಹ ವರ್ಧನೆಯಾದಂತೆ ಫಲಪ್ರದವಾಗುವ ಸತ್ಸಂಗ ಇಹಪರ ಕೀರ್ತಿಸಾಧನವಾಗುತ್ತದೆ

* * * *

ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್
ನ ಬ್ರೂಯಾತ್ ಸತ್ಯಮಪ್ರಿಯಂ ।
ನಾಸತ್ಯಂ ಚ ಪ್ರಿಯಂ ಬ್ರೂಯಾತ್
ಏಷ ಧರ್ಮಃ ಸನಾತನಃ ॥

ಸತ್ಯವಾದುದನ್ನು ನುಡಿಯಬೇಕು ; ಪ್ರಿಯವಾದುದನ್ನು ನುಡಿಯಬೇಕು. ಅಪ್ರಿಯವಾದ ಸತ್ಯವನ್ನು ನುಡಿಯಬಾರದು

ಇದು ಸನಾತನ ಧರ್ಮ ಈ ಸುಭಾಷಿತದಲ್ಲಿ ಅಪ್ರಿಯವಾದ ಸತ್ಯವನ್ನು ನುಡಿಯಬಾರದು. ಪ್ರಿಯವಾದ ಅಸತ್ಯವನ್ನು ನುಡಿಯಬಾರದು ಎಂಬ ಮಾತುಗಳು ಒಟ್ಟಾಗಿ ಬಂದಿವೆ. ಅಂದರೆ, ಸಂದರ್ಭಕ್ಕೆ ತಕ್ಕಂತೆ ಔಚಿತ್ಯವರಿತು ಮಾತಾಡಬೇಕು. ಅಪ್ರಿಯವಾದ ಸತ್ಯವನ್ನು ನುಡಿಯುವುದರಿಂದುಂಟಾಗುವ ದುಷ್ಪರಿಣಾಮವನ್ನು ಸಾದರಪಡಿಸುವ ಕಥೆಯೊಂದು ನಮ್ಮಲ್ಲಿ ಪ್ರಚಲಿತವಾಗಿದೆ ಕಾಡಿನಲ್ಲಿ ಒಬ್ಬ ಋಷಿ ಮರದ ಕೆಳಗೆ ಕುಳಿತಿದ್ದ ಅಲ್ಲಿಗೆ ಓಡಿಬಂದ ಗೃಹಸ್ಥನೊಬ್ಬ ಸಮೀಪದಲ್ಲಿದ್ದ ಪೊದೆಯಲ್ಲಿ ಅಡಗಿಕೊಂಡ. ಅತನ ಬೆನ್ನಟ್ಟಿಬಂದ ಕಳ್ಳ ಋಷಿಯನ್ನು ಕುರಿತು– "ಈ ಕಡೆ ಗೃಹಸ್ಥನೊಬ್ಬ ಓಡಿಬಂದ ನೋಡಿದಿರಾ ?" ಎನ್ನಲು ಸತ್ಯವ್ರತನಾದ ಋಷಿ ಪೂರ್ವಾಪರ ಯೋಚಿಸದೆ ಗೃಹಸ್ಥ ಅಡಗಿದ್ದ ಜಾಗ ತೋರಿಸಿದ. ಗೃಹಸ್ಥನನ್ನು ಕೊಂದು ಅವನಲ್ಲಿದ್ದ ದ್ರವ್ಯವನ್ನು ದೋಚಿದ ಮೇಲೆ 'ಗೃಹಸ್ಥನ ಕುರುಹನ್ನು ತನಗೆ ತೋರಿಸಿದಂತೆ ತನ್ನ ಕುರುಹನ್ನೂ ಋಷಿ ರಾಜಭಟರಿಗೆ ತೋರಿಸಿಬಿಡುತ್ತಾನೆ'ಂದು ಹೆದರಿದ ಕಳ್ಳ ಕಾರ್ಯಸಾಧನೆಯಾದ ಮೇಲೆ ಋಷಿಯನ್ನೂ ಕೊಂದ. ಹೀಗೆ ಸಮಯ, ಸಂದರ್ಭ ನೋಡದೆ ಸತ್ಯ ನುಡಿದಿದ್ದರಿಂದ ಋಷಿ ಗೃಹಸ್ಥನ ಸಾವಿಗೆ ಕಾರಣನಾದನಲ್ಲದೆ ತಾನೂ ಸತ್ತ ಒಂದು ಜೀವವನ್ನುಳಿಸಬಹುದಾದಂತಹ ಪರಿಸ್ಥಿತಿಯಲ್ಲಿ ಸಂದರ್ಭೋಚಿತವಾದ ಸುಳ್ಳುಹೇಳುವುದರಿಂದ ದೋಷವಿಲ್ಲ. ಅಂದಮಾತ್ರಕ್ಕೆ ಸುಳ್ಳುಹೇಳುವುದನ್ನೇ ಹವ್ಯಾಸವಾಗಿಸಿಕೊಳ್ಳಬಾರದು. ಮುಖ

( 38ನೇ ಪುಟ ನೋಡಿ )

ಶ್ರೀಮತಿ ಬಿ.ಎಸ್. ಸರೋಜ ಎಂ.ಎ,



ಅನಿವರ ಆಸ್ಥಾನ ಸಂದರ್ಭದಲ್ಲಿ ತೆಗೆದ ಪುಷ್ಪಪಲ್ಲಕ್ಕಿ ಉತ್ಸವದ ಚಿತ್ರ.


ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

 

# ಗೃಹಲಕ್ಷ್ಮಿ



## ಗಂಗಾದೇವಿ

## ವಿವರಿಸಿದ ಮಧುರಾ ನಗರ

ಗಾರ್ಗಿ, ಮೈತ್ರೇಯಿ ವೇದವನ್ನು ಕಲಿತವರು. ಚೆನ್ನಮ್ಮ, ಲಕ್ಷ್ಮೀಬಾಯಿ, ಬೆಳವಡಿ ಮಲ್ಲಮ್ಮ, ಮೊದಲಾದವರು ರಣರಂಗದ ಸಿಂಹಿಣಿಯರಾಗಿ ಮೆರದವರು. ಪತಿವ್ರತಾ ಶಿರೋಮಣಿ ಜಾನಕಿ, ಸತಿ ಅನಸೂಯ, ಪಾಂಚಾಲಿ, ಮಹಾಶ್ವೇತೆ, ಮುಂತಾದವರು ಇದ್ದಾರೆ. ಸಕಾಲದಲ್ಲಿ ತಮ್ಮ ಪತಿಯನ್ನು ಎಚ್ಚರಿಸಿ ದೇಶಕಲ್ಯಾಣ ಕೈಗೊಂಡ ಮಹಿಳೆಯರಿಗೆ ಕಡಿಮೆಯಿಲ್ಲ.

ಈ ಎಲ್ಲಾ ಗುಣಗಳ ಆಗರವಾಗಿದ್ದಳು "ಗಂಗಾದೇವಿ". ಇವಳು ವಿಜಯನಗರದ ಬುಕ್ಕರಾಯನ ಸೊಸೆ. ಮಧುರಾವಿಜಯಂ' ಎಂಬ ಕಾವ್ಯ ಈಕೆಯಿಂದ ವಿರಚಿತವಾಯಿತು. ಅವಳ ಕಾವ್ಯದಲ್ಲಿ ವೀರಾವೇಶವನ್ನು ಹುಟ್ಟಿಸುವ ಸಂದರ್ಭ ಹೆಚ್ಚಾಗಿದೆ, ಇದರಲ್ಲಿ ಸುಂದರವಾದ ಉಪಮಾನಗಳು ಉತ್ಪ್ರೇಕ್ಷೆಗಳೂ ಕಂಡುಬರುತ್ತದೆ. ವಿಜಯನಗರದ ಪುರಾತನ ವೈಭವವು ಸೊಗಸಾಗಿ ವರ್ಣಿತವಾಗಿದೆ.

ಶ್ರುತಿ ಅಸ್ತಂಗತವಾಗಿ. ನೀತಿ ಕಣ್ಮರೆಯಾದಾಗ ಧರ್ಮಕಥೆ ವಿರಮಿಸಿದರೆ, ಸಚ್ಚರಿತ್ರೆ ಭ್ರಷ್ಟವಾದರೆ, ಸತ್ಕರ್ಮ ಇಲ್ಲವಾದರೆ ನಗರ ಅಥವಾ ಒಂದು ದೇಶದ ಸ್ಥಿತಿ ಏನಾಗುವುದು ಎಂಬುದನ್ನು ಕಣ್ಣಿಗೆ ಕಟ್ಟುವಂತೆ ಗಂಗಾದೇವಿ ತನ್ನ ಕೃತಿಯಲ್ಲಿ ವಿವರಿಸಿರುವಳು.

'ಮಧುರೆ' ಹೆಸರಿಗೆ ತಕ್ಕಂತೆ ಮಧುರೆ. ಅತ್ಯಂತ ಸುಂದರವಾಗಿ, ವೈಭವಯುತವಾಗಿ ಮೆರೆದಿತ್ತು. ನಂತರ ತುರುಷ್ಕರ ಧಾಳಿಯಿಂದ ಮಧುರೆಯ ವೈಭವವು ನಾಶವಾಯಿತು. ಗಂಗಾದೇವಿಯು ಮಧುರೆಯ ದುರವಸ್ಥೆಯನ್ನು ಐತಿಹಾಸಿಕ ಸನ್ನಿವೇಶಕ್ಕೆ ಅನುಸಾರವಾಗಿ ಮನಕರಗುವ ರೀತಿಯಲ್ಲಿ ರಾಷ್ಟ್ರೀಯ ಭಾವನೆ, ವೀರಾವೇಶ, ಕೆರಳುವಂತೆ ವರ್ಣಿಸಿದ್ದಾಳೆ.

ಹಿಂದೆ ಮಧುರೆಯ ದೇವಾಲಯಗಳು ದಕ್ಷ ವಾರಸುದಾರರಿಂದ ಸಂರಕ್ಷಿಸಲ್ಪಡುತ್ತಿದ್ದವು. ದೇವರ ಆವಾಸಸ್ಥಾನವಾದ ಗರ್ಭಗೃಹಕ್ಕೆ ಹೆಚ್ಚಿನ ಪ್ರಾಧಾನ್ಯ ಇತ್ತು. ದೇವಾಲಯದ ಮುಂದ ಮೃದಂಗದ ಧ್ವನಿ ತುಂಬಿರುತ್ತಿತ್ತು. ಕಾವೇರಿ ನದಿಯಾದರೋ ಪ್ರವಾಹಪಾತಾಳಿಯಲ್ಲದ ಸ್ಥಳದಲ್ಲಿ ತನ್ನ ಪ್ರವಾಹ ಹರಿಯಗೊಟ್ಟಿರಲಿಲ್ಲ. ಅಗ್ರಹಾರಗಳಲ್ಲಿ ದೇಶ ಕಲ್ಯಾಣಕ್ಕಾಗಿ ನಿರಂತರವಾಗಿ ಯಾಗಗಳು ನಡೆದು ಅದರಿಂದ ಬಂದ ಧೂಮದಿಂದ ಸುಗಂಧ ಭರಿತವಾಗಿತ್ತು. ವೇದಘೋಷಗಳಿಂದ ಅಗ್ರಹಾರಗಳು ತುಂಬಿದ್ದವು.

ಮಧುರೆಯ ಉಪವನವು ತೆಂಗಿನ ಮರಗಳು ತುಂಬಿ ಸುಂದರವಾಗಿತ್ತು. ರಾಜಬೀದಿಗಳು ರಮಣಿಯರ ಕಾಲ್ಗೆಜ್ಜೆಯ ಧ್ವನಿಯಿಂದ ತುಂಬಿದ್ದವು. ರಾಜರ ಮನೆಯಂಗಳವು ಶೀತಲವಾದ ಗಂಧದ ನೀರಿನ ಸೇಚನೆಯಿಂದ ಸುಗಂಧಿತವಾಗಿದ್ದಿತು.

ಹಿಂದೆ ಮಧುರಾ ನಗರದಲ್ಲಿ ಗಿಳಿಗಳು ಸಹ ಮಧುರವಾಗಿ ಮಾತನಾಡುತ್ತಿದ್ದವು. ಮಧುರೆಯ ತಾಮ್ರಪರ್ಣಿಯ ನೀರು ಸ್ತ್ರೀಯರು ತಮ್ಮ ಮೈಗೆ ಲೇಪಿಸಿಕೊಂಡ ಗಂಧದಿಂದ ಸುಗಂಧಿತವಾಗಿತ್ತು. ಮಳೆ ಬಂದು ಕಾಲಕಾಲಕ್ಕೆ ಬೆಳೆಯಾಗಿ ಜನತೆಯು ಅಕಾಲ ಮರಣಗಳಾಗದೆ ದೀರ್ಘವಾದ ಆಯುಸ್ಸು ಆರೋಗ್ಯ, ಹೊಂದಿದ್ದರು. ಜನತೆಯ ಮುಖದಲ್ಲಿ ಸಂತೃಪ್ತಿ ಸಮಾಧಾನ, ಸಂತೋಷ, ಇವು ತುಂಬಿದ್ದವು, ಸತ್ಯ, ನೀತಿ, ನ್ಯಾಯ ಇದ್ದು ಮಧುರೆಯ ಹೆಸರಿಗೆ ತಕ್ಕಂತೆ ಮನೋಹರವಾಗಿದ್ದಿತು.

ಚಕ್ರದಂತೆ ಸುಖ ದುಃಖ ಸುತ್ತುತ್ತದೆ ಎಂಬ ನಾಣ್ಣುಡಿಗೆ ಅನ್ವಯವಾಗಿಯೋ



ಎಂಬಂತೆ, ಮಧುರೆ ತುರುಷ್ಕರ ಧಾಳಿಗೆ ತುತ್ತಾಯಿತು.

ದೇವಾಲಯಗಳು ಹುಳುತಿಂದ ಬಾಗಿಲಿನಿಂದ ಕೂಡಿದ್ದು ಪವಿತ್ರವಾದ ಗರ್ಭಗೃಹಗಳೆಲ್ಲಾ ನಾಶವಾದವು. ದೇವಾಲಯದ ಮುಂಭಾಗಗಳು ನರಿಗಳ ಭಯಂಕರ ಶಬ್ದದಿಂದ ತುಂಬಿದ್ದವು, ಕಾವೇರಿಯಾದರೋ ತನ್ನ ಪ್ರವಾಹವನ್ನು ಮನಬಂದಂತೆ ಹರಿಯಬಿಟ್ಟಳು. ಅಗ್ರಹಾರಗಳು ಹಸಿಯ ಮಾಂಸದ ವಾಸನೆಯಿಂದ ಕೂಡಿದ್ದವು, ಅತ್ಯಂತ ಮತ್ತರಾದ ತುರುಷ್ಕರ ಸಿಂಹನಾದ ಕೇಳಿ ಬರುತ್ತಿತ್ತು. ಕಲ್ಪವೃಕ್ಷ ಎನಿಸಿದ ತೆಂಗಿನಮರವು ಹೇಳಹೆಸರಿಲ್ಲದಂತಾಯಿತು.

ರಾಜಬೀದಿಗಳು ದ್ವಿಜರಿಗೆ ತೊಡಿಸಿದ ಸಂಕೋಲೆಗಳ ಶಬ್ದದಿಂದ ತುಂಬಿದ್ದವು, ರಾಜರ ಮನೆಯ ಅಂಗಳಗಳು ಸೆರೆಯಾದ ದ್ವಿಜರ ಕಣ್ಣೀರಿನಿಂದ ತುಂಬಿದ್ದವು. ಪ್ರಕೃತಿ ಸಹಜವಾಗಿ ಗಿಣಿಗಳು ಪಾರಸಿಕರ ಭಾಷೆಯನ್ನು ಆಡುತ್ತಿದ್ದವು. ತಾಮ್ರ ಪರ್ಣಿಯ ನೀರು ಯವನರು ಕೊಲ್ಲುವ ಗೋವುಗಳ ರಕ್ತದಿಂದ ಕೆಂಪಾಗುತ್ತಿತ್ತು.

( 40 ನೇ ಪುಟ ನೋಡಿ)

ಸಂಗ್ರಹ ಸಿ. ವಿ. ಶೈಲಜ

ಶ್ರೀವಿಷ್ಣುದೇವನಾ ಹೃದಯ ವಾಸಿನಿಯೆ!
ಪದ್ಮಾಯತಾಕ್ಷಿಯೆ! ಪದ್ಮನಂದನೆಯೆ!
ಸಕಲ ಭೂತಂಗಳಾ ಜನನಿಯಾಗಿಹಳೆ!
ಶಿರಬಾಗಿ ವಣಿ ಯಿಸೆನು ಶ್ರೀದೇವಿ! ನಿನಗೆ ೧

ಸ್ವಾಹೆಯೂ ಶ್ರದ್ಧೆಯೂ ಸ್ವಧೆಯೂ ನೀನಾದೆ
ರಾತ್ರಿಯೂ ಸಂಧ್ಯೆಯೂ ಪ್ರಭೆಯೂ ನೀನಾದೆ
ಸಿದ್ಧಿಯೂ ಬುದ್ಧಿಯೂ ಸಿರಿಯೂ ನೀನಾದೆ
ವಾಣಿಯೂ ಲೋಕಪಾವನೆಯೂ ನೀ ದೇವಿ ೨

ಆತ್ಮದಾ ವಿದ್ಯೆಯು ಯಜ್ಞದಾ ವಿದ್ಯೆ
ಏಕಾಂತ ವಿದ್ಯೆಯು ಹೆಚ್ಚಾದ ವಿದ್ಯೆ
ನೀನಾಗಿ ಜನತೆಗೆ ನೀಡುವೆ ತಾಯೆ!
ಸುರುಚಿರಾನ್ವಯ ಲಾಭ ಸೊಬಗಿನಾ ದೇವಿ ೩

ನೀ ತರ್ಕಶಾಸ್ತ್ರವು ನೀ ಮೂರುವೇದ
ನೀ ನೀತಿಶಾಸ್ತ್ರವು ನೀ ರಾಜನೀತಿ
ಸೌಂದರ್ಯಯುತವಾದ ಸೌಂದರ್ಯ ತೋರಿದ
ವಸ್ತು ನೀ ತುಂಬಿಹೆ ವಸುಧೆಯೊಳ್ ದೇವಿ ೪




ನಿರತ ಯೋಗಿಧ್ಯೇಯ ನಿಖಿಲಾಧ್ವರಾತ್ಮ
ಪರಮಾತ್ಮನಾದಂಥ ವೈಕುಂಠಪತಿಯ
ತವಗಾತ್ರದಲ್ಲಿಯೇ ವಾಸವಾಗಿರಲು
ಪರಳಿಗೆ ನಿನಗಿಂಥ ವಶವೆಂತು? ದೇವಿ ೫

ಮೂರು ಲೋಕಗಳನ್ನು ಪೂರೆದು ನೀನಿಂದು
ಪಾಲಿಸುತ್ತಿಹೆಯಮ್ಮ ಪರಿಪೂರ್ಣವಾಗಿ
ಅಖಿಲವು ಲಯವಾದ ಹಾಗೆ ಆಗುವುದು
ಸಲಹದೆ ನೀ ಬಿಟ್ಟ ಸಮಯದೊಳ್ ದೇವಿ ೬

ಧನಧಾನ್ಯ ಗೃಹಪತ್ನಿ ತನಯ ಬಾಂಧವರು
ಇತ್ಯಾದಿಯೊಳಗೊಂಡ ಎಲ್ಲ ಭಾಗ್ಯಗಳ
ನೀಡುತ್ತಲಿಹವಮ್ಮ ನಿನ್ನ ನೋಟಗಳೆ
ಭಕ್ತರಿಗೆಂದೆಂದು ಭಾಗ್ಯದಾ ದೇವಿ ೭

ಆರೋಗ್ಯಯುತದೇಹ ಐಶ್ವರ್ಯ ಸಿದ್ಧಿ
ಶತ್ರುವರ್ಗದ ನಾಶ ಸೌಖ್ಯಸಂಪ್ರಾಪ್ತಿ
ಶುಭದೃಷ್ಟಿ ನಿನ್ನಿಂದ ಸುರಿದಂಥ ಜನಕೆ
ಇಹದಲ್ಲಿ ಲಭಿಸದೆ ಇರುವುವೆ! ದೇವಿ ೮

ಸರ್ವ ಲೋಕಕೆ ನೀನ ಜನನಿಯಾಗಿರುವೆ
ಸರ್ವೇಶ ವಿಷ್ಣುವು ಜನಕನಾಗಿಹನು
ವ್ಯಾಪ್ತಿ ಹೊಂದಿಹರೆಲ್ಲ ವಸ್ತುವಿಸ್ತರದಿ
ನೀವಿಬ್ಬರೆಳೆಯಲ್ಲಿ ನೆಲೆಗೊಂಡು ದೇವಿ ೯

ಅಖಿಲ ಕಲ್ಯಾಣಿಯೆ! ಆಯುಷ್ಯ ಪತ್ನಿ
ದ್ರವ್ಯದಾ ಕೊಠಡಿಯು ದನಗಳಾ ಹಟ್ಟಿ
ಮನೆ ಮಠಗಳು ಹಾಗು ಮಂದಿಬೆಂಬಲವು
ಎಮ್ಮನ್ನು ಬಿಡದ ಹಾಗಿರಿಸಮ್ಮ ದೇವಿ ೧೦

ಮಕ್ಕಳೂ ಮರಿಗಳು ಮಣಿಭೂಷಣಗಳು
ಹಸುಗಳೂ ಕರುಗಳು ಆಪ್ತಬಂಧುಗಳು
ಅನಿಶವು ಬಿಡದಂತೆ ಆದರಿಸಮ್ಮ
ಶ್ರೀಹರಿ ಎದೆಯಲ್ಲಿ ಸೇರಿಹಾ ದೇವಿ ೧೧

ಯಾರ ನೀ ಬಿಡುವೆಯೋ ಅವರಲ್ಲಿ ಇರುವ
ಸತ್ಯವರ್ತನೆ ಬಿಟ್ಟು ಶೌಚವು ಬಿಟ್ಟು
ಸದ್ಗುಣಂಗಳು ಬಿಟ್ಟು ಸೌಶೀಲ್ಯ ಬಿಟ್ಟು
ತೊಲಗುವುವಾಕ್ಷಣವೆ ದಿಟವಾಗಿ ದೇವಿ ೧೨

ನಿನ್ನಯಾ ನೋಟಕ್ಕೆ ನಿಲುಕಿದಾ ಜನರು
ಅಲ್ಪರಾಗಿದ್ದರೂ ಆ ಕ್ಷಣದೊಳವರು
ಸದ್ಗುಣ ಪ್ರಕರವ ಸೌಶೀಲ ಧನವ
ವರವೈಭವಂಗಳ ಪಡೆಯುವರು ದೇವಿ ೧೩

ನಿನ್ನಯಾ ನೋಟಕ್ಕೆ ನೆಲೆಯಾದ ಮನುಜ
ಗುಣವಂತ ಸಿರಿವಂತ ಕುಲವಂತನಾಗಿ
ಧೀರನೂ ವೀರನೂ ಧೀಮಂತನಾಗಿ
ಸಂಸ್ತುತಿ ಪಡೆವನೀ ಜಗದಲ್ಲಿ ದೇವಿ ೧೪

ಕ್ಷಿತಿಯ ಕಾಯುವ ತಾಯೆ! ಶ್ರೀವಿಷ್ಣುದಯಿತೆ!
ವಿಮುಖಳಾಗುವೆ ನೀನು ವೀಕ್ಷಿಸುವಲ್ಲಿ
ಯಾವನ ದೆಸೆಯಲ್ಲಿ ಆವಾಗಲವನ
ಬಹುಗುಣಾನ್ವಿತ ಶೀಲ ವ್ಯರ್ಥವೇ ದೇವಿ ೧೫

ವನಜಾಕ್ಷಿ! ನಿನ್ನಯಾ ವರಗುಣ ಸ್ತೋಮ
ಬಣ್ಣಿಸಲಾಗದಾ ಬ್ರಹ್ಮದೇವನಿಗೂ
ಎಂದಿಗೂ ಬಿಡದಂತೆ ಎಮಗೆ ಕೈನೀಡಿ
ಕರುಣಾಳುವಾಗಿ ನೀ ಕಾಪಾಡು ದೇವಿ ೧೬

ವರದಾತ್ರಿ! ನನಗೆ ನೀ ವರನೀಡುವಲ್ಲಿ
ವರ ನಾನು ಪಡೆಯಲು ಪಾತ್ರನಾದಲ್ಲಿ
ಎಂದಿಗೂ ಬಿಡದಂತೆ ಈ ಮೂರು ಜಗವ
ಪಾಲಿಸು ನನಗಾದ್ಯ ವರವಾಗಿ ದೇವಿ! ೧೭

ಅಂಭೋಧಿಸಂಭವೆ! ಯಾರು ಮಾಡುವರೊ
ಈ ರೀತಿಯಿಂದಲಿ ನಿನ್ನಯಾ ಸ್ತುತಿಯ
ಅಂತಹ ಜನಕೆ ನೀ ಆಶ್ರಯ ನೀಡುವ
ವರವನಿನ್ನೊಂದ ದಯಪಾಲಿಸೈ ದೇವಿ! ೧೮

**ಶ್ರೀ ಜಿ. ಚೆನ್ನಯ್ಯ ಎಂ. ಎ.**

# ತಿರುಪತಿಯಲ್ಲಿ ಶ್ರೀಕೃಷ್ಣದೇವರಾಯ

ಕರ್ನಾಟಕ ರಾಜ್ಯರಮಾರಮಣನಾದ ಕೃಷ್ಣ ದೇವರಾಯನು ಉಚ್ಚವೈಷ್ಣವ ಭಕ್ತ. ಅವನಿಂದ ರಚಿತವಾದ 'ಆಮುಕ್ತಮಾಲ್ಯದ' ಮತ್ತು ಅವನ ಆಸ್ಥಾನವಿದ್ವನ್ಮಣಿಯಾದ ಅಲ್ಲಸಾನಿ ಪೆದ್ದನನ 'ಮನುಚರಿತ್ರೆ' ಇವುಗಳ ಆಧಾರದ ಮೇಲೆ ಅವನು ಶ್ರೀ ವೈಷ್ಣವ ಸಂಪ್ರದಾಯಿ ಎಂದು ವಿಶದ ಪಡುವುದು. ಅವನಿಗೆ ತಿರುಮಲೆಯ ವೆಂಕಟೇಶನಲ್ಲಿ ಅವಿಚ್ಛಿನ್ನ ಭಕ್ತಿ. ಸಾಮಾನ್ಯವಾಗಿ ವಿಜಯನಗರದ ಸಾಳುವ ತುಳುವ ಮತ್ತು ಆರುವೀಡುಮನೆತನದ ಎಲ್ಲ ರಾಜರುಗಳಿಗೂ ತಿರುವೇಂಗಡ ಸ್ವಾಮಿಯಲ್ಲಿ ಅಪಾರವಾದ ಭಕ್ತಿ. ಆದುದರಿಂದ ಅವರು ವೆಂಕಟೇಶನನ್ನು ತಮ್ಮ ಕುಲದೈವವೆಂದು ಭಾವಿಸಿ ಅವಕಾಶ ಸಿಕ್ಕಿದ ಹಾಗೆಲ್ಲ ಅವನಿಗೆ ಅನೇಕ ವಿಧವಾದ ಸೇವೆಗಳನ್ನು ಸಲ್ಲಿಸಿದ್ದಾರೆ. ಇವರೆಲ್ಲರಲ್ಲೂ ಕೃಷ್ಣದೇವರಾಯನಿಗೂ ತಿರುಮಲೆಗೂ ಇದ್ದ ಸಂಬಂಧ ಇನ್ನೂ ನಿಕಟವಾದುದು. ಅವನು ತನ್ನ ಎಲ್ಲ ವಿಜಯಯಾತ್ರೆಗಳ ಪ್ರಾರಂಭದಲ್ಲಿಯೂ, ಅಂತ್ಯದಲ್ಲಿಯೂ ತಿರುಪತಿಗೆ ಬಂದು ವೆಂಕಟೇಶನಿಗೆ ವಿವಿಧ ರೀತಿಯ ಸೇವೆಗಳನ್ನು ಸಲ್ಲಿಸಿದ್ದಾನೆ. ಅವನಿಗೆ ತಿರುಮಲದೇವಿ ಮತ್ತು ಚಿನ್ನಾಜಿದೇವಿ ಎಂಬ ಇಬ್ಬರು ರಾಣಿಯರಿದ್ದರು. ಇವರು ಸಾಮಾನ್ಯವಾಗಿ ಕೃಷ್ಣದೇವರಾಯನು ತಿರುಮಲೆಗೆ ಸಂದರ್ಶನಕ್ಕೆ ಹೋದಾಗಲೆಲ್ಲ ತಾವೂ ಹೋಗಿ ಅವನ ಸೇವೆಗಳ ಜೊತೆಗೆ ತಾವು ವಿವಿಧ ರೀತಿಯ ಕಾಣಿಕೆಗಳನ್ನು ಸಲ್ಲಿಸಿದ್ದಾರೆ ಅವೆಲ್ಲ ತಿರುಮಲೆ ದೇವಸ್ಥಾನದಲ್ಲಿ ಉಪಲಬ್ಧವಾಗಿರುವ ಶಾಸನಗಳಲ್ಲಿ ಸ್ಪಷ್ಟವಾಗಿ ಲಿಖಿತವಾಗಿವೆ. ಆ ಸಂದರ್ಭದಲ್ಲಿಯೇ ಅದೇ ಶಾಸನಗಳಲ್ಲಿ ಕೃಷ್ಣದೇವರಾಯನ ವಿಜಯಯಾತ್ರೆಯ ಅನೇಕ ವಿವರಗಳು ಉಕ್ತವಾಗಿರುವುದರಿಂದ ಅವುಗಳು ಐತಿಹಾಸಿಕ ದೃಷ್ಟಿಯಿಂದ ಬಹು ಉಪಯುಕ್ತವಾಗಿವೆ. ಕೃಷ್ಣದೇವರಾಯನು ಅವನ ಆಳ್ವಿಕೆಯ ಪ್ರಾರಂಭದ ವರ್ಷಗಳಲ್ಲಿ ಏಳುಸಲ ತಿರುಪತಿಗೆ ಬಂದು ದೇವರದರ್ಶನ ಮಾಡಿಕೊಂಡು ಹೋಗಿದ್ದಾನೆ.

ತಿರುಮಲೆ ದೇವಸ್ಥಾನದ ೫೦ ಶಾಸನಗಳಲ್ಲಿ ಕೃಷ್ಣದೇವರಾಯನು ಸೂಚಿತನಾಗಿದ್ದಾನೆ. ಅವುಗಳ ಕಾಲ ಕ್ರಿ. ಶ. ೧೫೧೩ ರಿಂದ ೧೫೨೪ರ ಮಧ್ಯಭಾಗ. ಅನೇಕಸಲ ಆ ಶಾಸನಗಳಲ್ಲಿ ಅವನೊಡನೆ ಅವನ ಇಬ್ಬರು ರಾಣಿಯರೂ ನಿರ್ದೇಶಿತರಾಗಿದ್ದಾರೆ. ಆ ಶಾಸನಗಳಲ್ಲೆಲ್ಲಾ ಅವರ ಸೇವೆಗಳು ಬಹುವಿವರವಾಗಿ ಉಕ್ತವಾಗಿವೆ ತನ್ನ ಆದಿಪತ್ಯದಲ್ಲಿದ್ದ ಆ ಎಲ್ಲ ರಾಜ್ಯದವರುಗಳಿಗೂ ಅದು ಸ್ಪಷ್ಟವಾಗಿ ತಿಳಿಯಬೇಕೆಂದು ಕೃಷ್ಣದೇವರಾಯನು ತನ್ನ ಶಾಸನಗಳನ್ನು ತಮಿಳು, ತೆಲುಗು ಮತ್ತು ಕನ್ನಡ ಭಾಷೆಗಳಲ್ಲಿ ಪ್ರಕಟಿಸಿದ್ದಾನೆ.

ಡಾ॥ ಎನ್. ಅನಂತರಂಗಾಚಾರ್

ಕೃಷ್ಣದೇವರಾಯನು ತನ್ನ ಇಬ್ಬರು ರಾಣಿಯರೊಡನೆ ತಿರುವೆಂಕಟನಾಥನನ್ನು ಮೊದಲನೆಯ ಸಲ ಸಂದರ್ಶಿಸಿದುದು ಅಂಗಿರಸ ಸಂವತ್ಸರದ ಫಾಲ್ಗುಣ ಶು॥ ೫ (ಶಕವರ್ಷ ೧೪೩೫–ಕ್ರಿ ಶ. ೧–೨–೧೫೧೩) ಯಂದು. ಈ ಸೇವೆಯ ವಿವರವನ್ನು ತಿಳಿಸುವ ಶಾಸನವು ತಿರುಮಲೆ ದೇವಸ್ಥಾನದ ಪ್ರಾಕಾರದ ಉತ್ತರಗೋಡೆಯಲ್ಲಿದೆ. ಅದರ ವಿವರ ಹೀಗಿದೆ. 'ನವರತ್ನ ಖಚಿತವಾದ ಕಿರೀಟ, ಮೂರೆಳೆಯ ಮುತ್ತಿನ ಸರ, ಮುತ್ತಿನ ಪದಕ, ೨೫ ಆರತಿಯ ತಟ್ಟೆಗಳು ಕಿರೀಟದಲ್ಲಿ ೧೫೫೫ ತೂಕದ ಬಂಗಾರದ ಕಟ್ಟಡ, ೧೦೭೬ ತೂಕದ ಕುಂದಣ ಬಂಗಾರ, ೨೮೨೨ ಕೆಂಪುಗಳು ೧೬೦ ವಜ್ರ, ೪೨೩ ಹಳೆಯ ವಜ್ರ, ಮೂರು ಮಾಣಿಕ್ಯಗಳು, ೧೦ ನೀಲಗಳು, ೧೭ ವೈಡೂರ್ಯ ಗೋಮೇಧಿಕ ಎಲ್ಲವೂ ಸೇರಿ ೩೧೩೦ ತೂಕ. ೧೬೩ ರತಿ ತೂಗುವ ಮುತ್ತುಗಳು, ಕಟ್ಟಡದ ಬಂಗಾರದ ಸರಿಗೆಸರ, ಕಿರೀಟದ ಒಟ್ಟುತೂಕ ೩೩೦೮, ಮುತ್ತಿನ ಮೂಕುತಿಸರದಲ್ಲಿ ೧೩೭೦



ತಿರುಮಲೆ ದೇವಸ್ಥಾನದಲ್ಲಿರುವ ಶ್ರೀ ಕೃಷ್ಣದೇವರಾಯ ಮತ್ತು ಅವನ ರಾಣಿಯರ ಪ್ರತಿಮೆಗಳು

ಜರಿ ಮುತ್ತುಗಳು, ಒಂದು ಮಾಣಿಕ್ಯ, ೨ ನೀಲ ಮಣಿಗಳು, ೧೫ ಅಡ್ಡಿಗೆಗಳು. ಇದರ ಒಟ್ಟು ತೂಕ ೨೨೨೫ ರತಿಗಳು. ಪದಕದಲ್ಲಿ ೬ ಮುತ್ತುಗಳೂ ೬೦ ವಜ್ರಗಳೂ ೧೧ ಪಚ್ಚೆಗಳೂ, ೩ ಮಾಣಿಕ್ಯಗಳೂ, ೫ ಕೆಂಪುಗಳೂ ಇದ್ದು ಅದರ ಒಟ್ಟು ತೂಕ ೯೧ ಕೃಷ್ಣದೇವರಾಯನ ರಾಣಿ ಚಿನ್ನಾಜಿ ಅಮ್ಮಣ್ಣಿಯವರು ತಿರವೇಂಗಡನಾಥನ ಚಿನವಾಲು (ಹಾಲು) ನೈವೇದ್ಯಕ್ಕೆ ೩೨ರ ತೂಕದ ಬಂಗಾರದ ಬಟ್ಟಲನ್ನೂ ಅಂತದೇ ಅದೇ ತೂಕದ ಇನ್ನೊಂದು ಬಂಗಾರದ ಬಟ್ಟಲನ್ನು ಮಹಾರಾಣಿ ತಿರುಮಲದೇವಿಯರು ಸಮರ್ಪಿಸಿದ್ದಾರೆ.

ಅವನು ೨ನೆಯ ಸಲ ತಿರುಮಲೆಗೆ ಬಂದುದು (ಮೂರುತಿಂಗಳೊಳಗೆ) ೨-೫-೧೫೧೩ರಲ್ಲಿ. ಈ ಸಲ ಇವನ ರಾಣಿಯರು ಬಂದಿರಲಿಲ್ಲ. ಈಗ ಮೂಲದೇವರಿಗೆ ಕೆಲವು ತಿರುವಾಭರಣಗಳನ್ನು (ಅಂದರೆ ಉಡಿದಾರ, ಒರೆಯುಳ್ಳ ಕತ್ತಿ, ಕರಾರಿ, ಪದಕ, ಭುಜಕೀರ್ತಿಗಳು, ಅಡ್ಡಿಕೆಗಳೂ (ಎಲ್ಲವೂ ಕೆಂಪು, ವಜ್ರಪಚ್ಚೆಗಳಿಂದ ಕೂಡಿದವು) ಸಮರ್ಪಿಸಿದನು. ಉತ್ಸವದೇವರುಗಳಿಗೆ (ಮಲೈಯಪ್ಪ ಮತ್ತು ನಾಂಚ್ಚಿಯಾರರಿಗೆ) ಮೂರು ಕಿರೀಟಗಳೂ ಸಮರ್ಪಿತವಾದುವು.

ಅದೇವರ್ಷದ ಜೂನ್ ೧೩ನೆಯ ತಾರೀಖಿನ ದಿನ ಕೃಷ್ಣದೇವರಾಯನು ತಿರುಮಲೆಗೆ ಮೂರನೆಯ ಸಲ ಬಂದು ವೆಂಕಟೇಶ್ವರನ ನಿತ್ಯನೈಮಿತ್ತಿಕ ನಿವೇದನಗಳಿಗಾಗಿ ಅಯ್ದು ಗ್ರಾಮಗಳನ್ನು ಧಾರಾಪೂರ್ವಕ ದಾನಮಾಡಿರುವುದಲ್ಲದೆ ತನ್ನ ತಂದೆ ನರಸನಾಯಕರ ಕ್ಷೇಮಾಭಿವೃದ್ಧಿಗಾಗಿ ತ್ರೈಮಾಸದಲ್ಲಿ ಸಂವತ್ಸರೋತ್ಸವವನ್ನೂ ಏರ್ಪಡಿಸಿದನು ಇದನ್ನು ನಿರ್ದೇಶಿಸುವ ಶಾಸನಕ್ಕೆ ಐತಿಹಾಸಿಕ ದೃಷ್ಟಿಯಿಂದ ಬಹುಗಣ್ಯತೆಯಿದೆ. ಇದರಲ್ಲಿ ಕೃಷ್ಣದೇವರಾಯನ ಸಂಪೂರ್ಣವಂಶವೃಕ್ಷವು ನಿರೂಪಿತವಾಗಿದೆ. ಅಲ್ಲದೆ ಇದರಲ್ಲಿ ಕೃಷ್ಣದೇವರಾಯನಿಗೆ 'ದೋಷಕೃತಪ್ರತಿ ಪಾರ್ಥಿವ ದಂಡ' 'ಶೇಷ ಭೃತ ಕ್ಷಿತಿ ರಕ್ಷಣ ಶೌಂಡ', 'ಭಾಷೆಗೆ ತಪ್ಪುವ ರಾಯರ ಗಂಡ', 'ಅರ್ಥತೋಷಕೃತ್' 'ರಣಚಂಡ ರಾಜಾಧಿರಾಜ' 'ರಾಜಪರಮೇಶ್ವರ' 'ಮೂರು ರಾಯರ ಗಂಡ' 'ಪರರಾಯ ಭಯಂಕರ', 'ಹಿಂದೂರಾಜಸುರತ್ರಾಣ' 'ದುಷ್ಟ ಶಾರ್ದೂಲ ಮರ್ದನ' 'ಗಜೌಘ ಗಂಡಭೇರುಂಡ' ಮೊದಲಾದ ಬಿರುದುಗಳಿದ್ದವೆಂದು ತೋರುತ್ತದೆ.

ಕ್ರಿ ಶ. ೧೫೧೪ರಲ್ಲಿ ಕೃಷ್ಣದೇವರಾಯನನ್ನು ಪ್ರತಾಪರುದ್ರ ಗಜಪತಿಯನ್ನು ಹಿಂಬಾಲಿಸಿ ಓಡಿಸಿ ಉದಯಗಿರಿಯನ್ನು ಸ್ವಾಧೀನ ಪಡಿಸಿಕೊಂಡು ರಾಜಧಾನಿಯಾದ ವಿಜಯನಗರಕ್ಕೆ ಹಿಂತಿರುಗುವಾಗ ನಾಲ್ಕನೆಯ ಸಲ ತಿರುಮಲೆಯನ್ನು ಸಂದರ್ಶಿಸಿದನು. ಈ ಸಲ ಅವನು ವೆಂಕಟೇಶ್ವರನಿಗೆ ಕನಕಾಭಿಷೇಕವನ್ನು ಮಾಡಿಸಿದನು. ಇದರ ಖರ್ಚಿಗಾಗಿ ೩೦,೦೦೦ ವರಹಗಳನ್ನು ದಾನ ಮಾಡಿದನು. ನಿತ್ಯ ಕೈಂಕರ್ಯಕ್ಕಾಗಿ ತಾಳ್ಲಪಾಕ ಗ್ರಾಮವನ್ನು ದಾನಮಾಡಿ ಆ ಸೇವೆಯ ಸಂದರ್ಭದಲ್ಲಿ ಸೇವಾರ್ಥಗಾರರ ಪಾಲಿಗೆ ಬರಬೇಕಾದ ನಿವೇದಿತ ಪ್ರಸಾದದಲ್ಲಿ ನಾಲ್ಕನೆಯ ಒಂದು ಭಾಗವನ್ನು ರಂಗದೀಕ್ಷಿತ, ಶಿವದೀಕ್ಷಿತ ಮತ್ತು ತಿರುಪ್ಪಾಣಿಪಿಳ್ಳೆಗೆ ಕೊಡತಕ್ಕದ್ದೆಂದೂ ಉಳಿದ ಮೂರು ಭಾಗವನ್ನು ಸತ್ರದಲ್ಲಿ ಬ್ರಾಹ್ಮಣ ಭೋಜನಕ್ಕೆ ಉಪಯೋಗಿಸತಕ್ಕದ್ದೆಂದೂ ನಿರ್ದೇಶಿಸಿದನು. ರಣರಂಗದಿಂದ ನೇರವಾಗಿ ತನ್ನೊಡನೆಯೇ ಬಂದಿದ್ದ ಚಿನ್ನಾಜಿ ದೇವಿಯು ವೆಂಕಟೇಶನಿಗೆ ಒಂದು ಪದಕವನ್ನು ನವರತ್ನ ಖಚಿತವಾದ ಕಂಠೀಹಾರವನ್ನು ಸಮರ್ಪಿಸಿದಳು ಹಾಗೆಯೇ ನಿತ್ಯನಿವೇದನಕ್ಕಾಗಿ ಮುಡಿಯೂರು ಗ್ರಾಮವನ್ನು ದಾನಮಾಡಿ ನಿವೇದಿತ ಪ್ರಸಾದದಲ್ಲಿ ಸೇವಾರ್ಥಗಾರರ ಅಂಶದಲ್ಲಿ ಒಂದು ಭಾಗವನ್ನು ತಿರುಪ್ಪಾಣಿಪಿಳ್ಳೆಗೂ ಉಳಿದ ಮೂರುಭಾಗವನ್ನು ಸತ್ರದ ಉಪಯೋಗಕ್ಕೂ ಕೊಡುವಂತೆ ಏರ್ಪಡಿಸಿದಳು. ತಿರುಮಲೆದೇವಿಯು ಸ್ವಾಮಿಗೆ ಒಂದು ಪದಕವನ್ನೂ ಪಿರಾಳಕ್ಕೊಳತ್ತೂರ್ ಎಂಬ ಗ್ರಾಮವನ್ನೂ ದಾನಮಾಡಿ ಪ್ರಸಾದವಿನಿಯೋಗವನ್ನು ಮೇಲಿನಂತೆಯೇ ನಿಗದಿ ಮಾಡಿದಳು ರಾಜನೊಡನೆಯೇ ಬಂದಿದ್ದ ಅವನ ಪುರೋಹಿತನಾದ ನಾರಾಯಣದೀಕ್ಷಿತನ ಮಗನಾದ ಯಜ್ಞನಾರಾಯಣದೀಕ್ಷಿತನು ನಾಲ್ಕುದಿನಗಳ ಮೇಲೆ ನಾಲ್ಕುನಿರ್ದೇಶಿತ ಸೇವೆಗಳಿಗೆ ೧೦,೦೦೦ ಚಕ್ರ (ಸುವರ್ಣನಾಣ್ಯ) ಗಳನ್ನು ದಾನಮಾಡಿದನು.

ಮೇಲಿನ ಕನಕಾಭಿಷೇಕದ ಸಂದರ್ಭದಲ್ಲಿ ದೇವರಿಗೆ ೪೮೩ ಮುತ್ತುಗಳು ೧೫೪ ಮಾಣಿಕ್ಯಗಳೂ ೧೨೩ ನೀಲಮಣಿಗಳು ೪೮೦ ಚಿನ್ನದ ಕುಸುರಿ ಸರಗಳೂ, ೧೬೦ ಅಣಕಟ್ಟೆಗಳಿಂದ ಕೂಡಿದ ಒಟ್ಟು ೨೫೦ ತೂಕದ ಮೂರು ಎಳೆ

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
## ತಿರುಚಾನೂರು

### ಅರ್ಜಿತ ಸೇವಾ ವಿವರ

| | | | | | |
|---|---|---|---|---|---|
| 1. | ದರ್ಶನ. | ವಿಶೇಷ ಪ್ರವೇಶ ಪ್ರತಿಯೊಬ್ಬರಿಗೆ | | ರೂ | 2–00 |
| 2. | ಅರ್ಜಿತ | ಕಾಲಸೋಲ | 1) ಪೊಂಗಲ್ | ರೂ | 55–00 |
| | | | 2) ಪುಳಿಯೋಗರೆ | ರೂ | 50–00 |
| | | | 3) ದಧ್ಯೋದನ | ರೂ | 40–00 |
| | | | 4) ಕೇಸರಿಬಾತ್ | ರೂ | 85–00 |
| | | | 5) ಸಕ್ಕರೆ ಪೊಂಗಲ್ | ರೂ | 65–00 |
| | | | 6) ದೋಸೆ | ರೂ | 35–00 |
| | | | 7) ಶಾಕರಬಾತ್ | ರೂ | 90–00 |
| | | | 8) ಸೀರಾ | ರೂ | 155–00 |
| 3. | ಸೇವೆಗಳು : | | 1) ನಿತ್ಯ ಅರ್ಚನೆ ಒಂದು ವರ್ಷಕ್ಕೆ | ರೂ | 150–00 |
| | | | 2) ಸಹಸ್ರನಾಮಾರ್ಚನೆ | ರೂ | 6–50 |
| | | | 3) ಅರ್ಚನೆ | ರೂ | 1–00 |
| | | | 4) ಆರತಿ | ರೂ | 0–50 |
| | | | 5) ಪೂರಾಭಿಷೇಕ (ಶುಕ್ರವಾರಗಳಲ್ಲಿ) | ರೂ | 100–00 |
| | | | 6) ಊಂಜಲ್ ಸೇವೆ ( ,, ಸಂಜೆ) | ರೂ | 150–00 |
| | | | 7) ತಿರುಚ್ಚಿ ಉತ್ಸವ | ರೂ | 63–00 |
| | | | 8) ಗಜವಾಹನ | ರೂ | 32–00 |

—ಪೇಷ್ಕಾರ್

ಸರವನ್ನು ದಾನವಮಾಡಿದನು. ೩೨೨ ವಜ್ರಗಳನ್ನು ನೂರು ಮಾಣಿಕ್ಯಗಳಿಂದ ಕೂಡಿದ ೨೬೫ ತೂಕದ ಒಂದು ಜೊತೆ ತೋಳು ಬಳೆಗಳನ್ನು ಸಮರ್ಪಿಸಿದನು. ದೇವರಿಗೆ ಪ್ರತಿನಿತ್ಯವೂ ಹತ್ತು ತಿರುಪ್ಪಾನಕ ತಳಿಗೆಗಳೂ ಎರಡು ತಿರುಕ್ಕಾವಡ್ಕೈ ಮತ್ತು ಎರಡು ಅಪ್ಪಪಡಿಗಳನ್ನು ಒಪ್ಪಿಸಬೇಕೆಂದು ನಿಗದಿಮಾಡಿದನು.

ಅಯ್ದನೆಯ ಬಾರಿ ಕೃಷ್ಣದೇವರಾಯನು ತಿರುಮಲೆಗೆ ಭೇಟಿಕೊಟ್ಟಿದ್ದು ೧೫೧೭ ನೆಯ ಜನವರಿ ೨ ರಂದು. ಆ ವೇಳೆಗೆ ಕೃಷ್ಣದೇವರಾಯನು ಗಜಪತಿರಾಯನ ಮೇಲೆ ತನ್ನ ವಿಜಯವನ್ನು ಸಾಧಿಸಿದ್ದನು. ತನ್ನ ಪೂರ್ವವಿಜಯ ಯಾತ್ರೆಯನ್ನು ಮುಗಿಸಿ ೧೫೧೫ನೆಯ ಅಕ್ಟೋಬರ್ ೨೫ ರಂದು ತಿರುವೇಂಗಡನಾಥನಿಗೆ ರಾಜಧಾನಿಯಾದ ವಿಜಯನಗರದಿಂದಲೇ ಒಂದು ಪ್ರಭಾವಳಿಯನ್ನು ಕಳುಹಿಸಿದ್ದನು. ಈ ಪ್ರಭಾವಳಿಯಲ್ಲಿ ೮೧ ಮಾಣಿಕ್ಯಗಳೂ ೧೦೬೪ ಕೆಂಪುಗಳೂ ೬೫೪ ವಜ್ರಗಳೂ ೫೩೦ ನೀಲಮಣಿಗಳೂ ೪೦ ವೈಢೂರ್ಯಗಳೂ ೪೫ ಗೋಮೇಧಿಕಗಳೂ ೬೫ ಪುಷ್ಯರಾಗಗಳೂ ೯೨೦ ಹಳೆಯ ವಜ್ರಗಳೂ, ೩೯೩೩ ಮುತ್ತುಗಳೂ, ನಾಲ್ಕು ಗಶಣಿ ನೀಲಗಳೂ, ಆರು ಹರಳುಗಳೂ ೩೦ ಶಂಖಗಳೂ ಇದ್ದವೆಂದು ವರ್ಣಿತವಾಗಿದೆ. ಪ್ರಭಾವಳಿಯ ಒಟ್ಟು ೩೧೧೨೪ ತೂಕಉಳ್ಳದ್ದು

ಅಯ್ದನೆಯ (೨-೧-೧೫೧೭) ಸಲ ಕೃಷ್ಣದೇವರಾಯನು ತಿರುಮಲೆಗೆ ಬಂದಾಗ ದೇವರಿಗೆ ಕಂಠಮಾಲೆ ಮತ್ತು ಪದಕಗಳನ್ನೂ ಸಮರ್ಪಿಸಿದುದಲ್ಲದೆ ಗರ್ಭಗುಡಿಯ ಮೇಲಿರುವ ವಿಮಾನಕ್ಕೆ ಬಂಗಾರದ ಮೆರಗು ಹಾಕುವುದಕ್ಕೆ ೩೦೦೦೦ ಗಟ್ಟಿ ವರಹಗಳನ್ನು ಸಲ್ಲಿಸಿ ತಿರುವೇಂಗಡನಾಥನಿಗೆ ಪ್ರತಿಶುಕ್ರವಾರವೂ ನಡೆಯುವ ಪುಳಿಕಾಪು ನೇತಿಗೆ (ತಿರುಮಂಜನ) ಸುತ್ತಮುತ್ತಲಿನ ಹಳ್ಳಿಗಳ ಸುಂಕವನ್ನು ದೇವಸ್ಥಾನಕರ್ತಾರರು ಪಡೆಯಬಹುದೆಂದು ನಿಷ್ಕರ್ಷಿಸಿದನು. ಈ ಸಮಯದಲ್ಲಿ ದೇವಸ್ಥಾನದ ಹೊರಬಾಗಿಲಿನ ಪಕ್ಕದಲ್ಲಿ ತನ್ನ ಮತ್ತು ತನ್ನ ರಾಣಿಯರ ತಾಮ್ರವಿಗ್ರಹವನ್ನು ಸ್ಥಾಪಿಸಿದ ವಿವರವು 'ರಾಯವಾಚಕಮು' ಎಂಬ ತೆಲುಗು ಗ್ರಂಥದಿಂದ ತಿಳಿದುಬರುತ್ತದೆ. ಈ ವಿಗ್ರಹಗಳಲ್ಲಿ ಮಧ್ಯೆ ಇರುವುದು ಕೃಷ್ಣದೇವರಾಯನದು. ಬಲಗಡೆ ಚಿನ್ನಾಜಿ ದೇವಿಯರು, ಎಡಗಡೆಯದು ತಿರುಮಲೆ ದೇವಿಯರು ಎಂದು ಕನ್ನಡದಲ್ಲಿ ಲಿಖಿತವಾಗಿದೆ. ಆತನು ಕಲಶಗಳಿಗೆ ಸುವರ್ಣ ಲೇಪನ ಮಾಡಿದ ವಿಷಯವು ತೆಲುಗು ಮತ್ತು ತಮಿಳು ಶಾಸಗಳಲ್ಲಿ ನಮೂದಾಗಿದೆ. ಕೃಷ್ಣದೇವರಾಯನು ಕಲಶಕ್ಕೆ ಚಿನ್ನದ ಮಿರುಗು ಹಾಕಿಸಿದುದು ನಾಲ್ಕನೆಯಸಲ. ಇದಕ್ಕೆ ಹಿಂದೆ ಜಟಾವರ್ಮನ್ ಸುಂದರಪಾಂಡ್ಯ, ಸಾಳುವ ಮಂಗಿದೇವ ಮಹಾರಾಜ ಮತ್ತು ಅಮಾತ್ಯಶೇಖರ ಮಲ್ಲಣ ಇವರುಗಳಿಂದ ಈ ಕಾರ್ಯ ಬೇರೆ ಬೇರೆ ಕಾಲಗಳಲ್ಲಿ ನಡೆದಿತ್ತು. ಮುಂದೆ ವೆಂಕಟಪತಿ ರಾಯನಕಾಲದಲ್ಲಿ ಕಂಚಿಯ ಕೋಟಿಕನ್ಯಕಾದಾನಂ ತಾತಾಚಾರ್ಯರಿಂದಲೂ ಪುನಃ ಕ್ರಿ.ಶ ೧೯೦೯ರಲ್ಲಿ ದೇವಾಲಯಾಧಿಕಾರಿ ರಾಮಲಕ್ಷ್ಮಣದಾಸಜಿ ಮಹಂತರಿಂದಲೂ ಲೇಪನವಾಗಿದೆ.

೧೫೧೮ರ ಕಮಲಾಪುರದ ಶಾಸನದಿಂದ ಕೃಷ್ಣದೇವರಾಯನು ಕಳಶದ ಸುವರ್ಣಲೇಪನಕಾಲದಲ್ಲಿ ಹಾಜರಾಗಿದ್ದುದು ವ್ಯಕ್ತವಾಗಿದೆ. ತನಗೆ ಹೊಸದಾಗಿ ಜನಿಸಿದ ಮಗುವಿನ (ತಿರುಮಲರಾಯ ಮಹಾರಾಯ) ಶ್ರೇಯೋಭಿವೃದ್ಧಿವಾಗಿ ಕೃಷ್ಣದೇವರಾಯನು ವೆಂಕಟೇಶನಿಗೆ ಕೆಲವು ಗ್ರಾಮಗಳನ್ನು ದಾನಮಾಡಿದುದು ಮದ್ರಾಸ್ ಶಾಸನದ ಇಲಾಖೆಯ ೧೫೨೨ನೆಯ ವರ್ಷದ ವರದಿಯ ಒಂದು ಶಾಸನದಿಂದ ತಿಳಿದು ಬರುತ್ತದೆ. (ಈ ಮಗುವು ೬ ವರ್ಷಕ್ಕೆ ತೀರಿಕೊಂಡಿತು.)

ಕೃಷ್ಣದೇವರಾಯನು ವಿಕ್ರಮಸಂವತ್ಸರದ ಮಾಘ ಶುದ್ಧ ಏಕಾದಶಿ (೬–೨–೧೫೨೧) ರಂದು ಏಳನೆಯಸಲ – ಕೊನೆಯಸಲ – ತಿರುವೇಂಗಡನ ಸಂದರ್ಶನಕ್ಕೆ ಬಂದಿದ್ದನು. ಆಗ ತಾನು ದೇವರಿಗೆ ನವರತ್ನ ಖಚಿತವಾದ ಪೀತಾಂಬರ ಮತ್ತು ಪದಕಗಳನ್ನು ಅವನ ಮಹಾರಾಣಿ ತಿರುಮಲದೇವಿಯು ಒಂದು ನವರತ್ನ ಖಚಿತ ಪದಕ ಮತ್ತು ೧೦೦೦೦ ವರಹಗಳನ್ನು ಸಮರ್ಪಿದರು ಮುಂದಿನ ಮತ್ತೊಂದು ಶಾಸನದಲ್ಲಿ ಈ ವಿಷಯವು ಸೂಚಿತವಾಗಿದೆ. ಆದರೆ ಅವುಗಳಲ್ಲಿ ಅವನ ವೈಯಕ್ತಿಕ ದಿಗ್ವಿಜಯಗಳಾವುದರ ಉಲ್ಲೇಖವೂ ಇಲ್ಲ.

ಅವನ ಕೊನೆಯ ಶಾಸನ ಕ್ರಿ.ಶ. ೧೫೨೪ನೆಯ ವರ್ಷದ್ದು. ಕೃಷ್ಣದೇವರಾಯನು ತಿರುಪತಿ ಮತ್ತು ತಿರುಮಲೆಗಳಲ್ಲಿ ಒಂದು ಮನೆ ಮತ್ತು ಒಂದು ನಿವೇಶನವನ್ನು ಸ್ಥಾನವಾಸಿಗಳಾದ ವ್ಯಾಸತೀರ್ಥ ಶ್ರೀಪಾದ ಒಡೆಯರ್‌ಗೆ ಸಮರ್ಪಣೆಮಾಡಿರುವ ವಿಷಯವು ಇದರಲ್ಲಿ ಉಕ್ತವಾಗಿದೆ. ಈ ಶಾಸನದಲ್ಲಿ ವ್ಯಾಸತೀರ್ಥರು 'ಬ್ರಹ್ಮಣ್ಯತೀರ್ಥರ ಕರಸಂಜಾತವೆಂದೂ ಪರಮಹಂಸ ಪರಿವ್ರಾಜಕರೆಂದೂ ಸಂಬೋಧಿತರಾಗಿದ್ದಾರೆ'. ಸಕಲ ವಿದ್ವಜ್ಜನ ಮನಃಪದ್ಮವನ ಸೌಪತ್ತಿಕಾ, 'ಪದವಾಕ್ಯ ಪ್ರಮಾಣಜ್ಞ', 'ದುರ್ವಾದಿಗರ್ವ ಸರ್ವಸ್ವಾಪಹರ' 'ಶ್ರೀ ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ' ಎಂದೂ ಸಂಬೋಧಿತರಾಗಿದ್ದಾರೆ. ಇವರಿಗೆ ದಾನ ಮಾಡಿರುವ ನಿವೇಶನಗಳಲ್ಲಿ ಒಂದು ತಿರುಪತಿಯಲ್ಲಿ ಗೋವಿಂದರಾಜ ದೇವಾಲಯದ ಉತ್ತರದ ಭಾಗದಲ್ಲಿಯೂ ಮತ್ತೊಂದು ತಿರುಮಲೆಯಲ್ಲಿ ಸ್ವಾಮಿ ಪುಷ್ಕರಿಣಿಯ ಉತ್ತರದ ಬೀದಿಯಲ್ಲಿಯೂ ಇದ್ದುವು. ಮನೆಯು ತಿರುಮಲೆಯಲ್ಲಿ ಪಾಪನಾಶಿನಿಗೆ ಹೋಗುವ ರಸ್ತೆಗೆ ಉತ್ತರದಲ್ಲಿತ್ತು.

ಇದೇ ಶಾಸನದಲ್ಲಿ ವ್ಯಾಸತೀರ್ಥರಿಗೆ ಪುರಟ್ಟಾಶಿ ತಿರುನಾಳಿನ ಪೂರಾಯಂ ಸೇವಾರ್ಥದಲ್ಲಿ ಒಂದು ಭಾಗವನ್ನು ಕೊಡತಕ್ಕದ್ದೆಂದೂ ನಿರ್ದೇಶವಾಗಿದೆ. ಅಲ್ಲಿಗೆ ಕಡೈಕ್ಕಾಟ್ಟವ್ವಳ್ಳಿ ಗ್ರಾಮದ ಉತ್ಪತ್ತಿಯಲ್ಲಿ ಅರ್ಧ, ತಾಳ್ಳಪಾಕಂ, ವಿರಾಡಂ, ದಾರತ್ತೂರ್, ಮೂಡಿಯೂರು, ಚಕ್ರವಾಡಿ, ಮರೈಯೂರು ಈ ಗ್ರಾಮಗಳ ಪೂರ್ಣ ಆದಾಯವೂ ವ್ಯಾಸತೀರ್ಥರಿಗೆ ಕೊಡಲ್ಪಟ್ಟಿದೆ. ವ್ಯಾಸತೀರ್ಥರ ಪ್ರಸಾದದಲ್ಲಿ ಒಂದು ಭಾಗವನ್ನು ಅವರ ಮಠದಲ್ಲಿ ಬ್ರಾಹ್ಮಣ ಸಂತರ್ಪಣೆಗೆ ಉಪಯೋಗಿಸತಕ್ಕದ್ದು ಈ ಮಠವು ಮೇಲೆ ಸೂಚಿಸಿರುವ ನಿವೇಶನದಲ್ಲಿ ಕಟ್ಟಿ ಬೇಕೆಂದಿರುವ ಮಠವಿರಬಹುದು. ಈ ನಿವೇಶನದ ಒಂದು ಭಾಗವು ದೇವಸ್ಥಾನದ ನೌಕರನಾಗಿದ್ದ ನಂಬಿಸಿಂಗಪ್ಪಯ್ಯನಿಗೆ ಸೇರಿದ್ದಿರಬೇಕು ಅವನು ದೇವಸ್ಥಾನಕ್ಕೆ ಸೇರಿದ ಕೆಲವು ವಸ್ತುಗಳನ್ನು ದುರುಪಯೋಗಪಡಿಸಿದುದರಿಂದ ಈ ಭಾಗವನ್ನು ಅದರ ಪರಿಹಾರಕ್ಕಾಗಿ ಮುಟ್ಟುಗೋಲು ಹಾಕಿಕೊಂಡಿದ್ದಿರಬೇಕು ಮೇಲೆ ಹೇಳಿದ ಗ್ರಾಮಗಳಲ್ಲಿ ದಾರತ್ತೂರು ಚಕ್ರವಾಡಿ ಮತ್ತು ಮರೈಯೂರು ಗ್ರಾಮಗಳು ಕೃಷ್ಣದೇವರಾಯನಿಂದಲೂ ಉಳಿದುವು ಚಿನ್ನಾಜಿ ದೇವಿಯಿಂದಲೂ ಪ್ರಸಾದವು ತಿರುಮಲದೇವಿಯಿಂದಲೂ ದಾನ ಮಾಡಲ್ಪಟ್ಟದ್ದಾಗಿರಬೇಕು.

ಕೃಷ್ಣದೇವರಾಯನ ಸೇವಾಮನೋಭಾವವನ್ನು ಅವನ ಸಾಮಂತರೂ ಅಧಿಕಾರಿಗಳನೇಕರೂ ಸಂಪೂರ್ಣವಾಗಿ ಅನುಸರಿಸಿ ತಮಗಾಗಿಯೂ ತಮ್ಮ ಒಡೆಯರ ಶ್ರೇಯಸ್ಸಿಗಾಗಿಯೂ ವೆಂಕಟೇಶನಿಗೆ ಅನೇಕ ದತ್ತಿಗಳನ್ನು ಬಿಟ್ಟಿದ್ದಾರೆ. ಅವರಲ್ಲಿ ಪ್ರಧಾನಿ ತಿಮ್ಮರಸ, ಸಾಳುವ ಗೋವಿಂದರಾಜ ತ್ರಿಯಂಬಕದೇವ, ರಾಯಸಂ ಕೊಂಡರಸಯ್ಯ, ಕರಣಿಕ ಬಸವರಸ, ಕರಣಿಕ ಅಟ್ಟವಣಿ ಬಸವರಸ, ಅವಸರದ ನರಸಯ್ಯ ಮತ್ತು ಅವನ ಸಹೋದರ ತಿಮ್ಮಯ್ಯ, ಉಡಿಯಮ್ ಎಲ್ಲಪ್ಪನಾಯಕ, ಅಡಿಯಪ್ಪ, ಭಯ್ಯಪ್ಪನಾಯಕ ಮೊದಲಾದವರನ್ನು ಹೆಸರಿಸಬಹುದು. ಇವರ ಸೇವೆಯೆಲ್ಲ ದೇವಸ್ಥಾನದ ಶಾಸನಗಳಲ್ಲಿ ಲಿಖಿತವಾಗಿವೆ, ಇವರ ಬಹುಮುಖವಾದ ಸೇವೆಗಳಿಂದ ತಿರುಪತಿ ತಿರುಮಲೆ ದೇವಸ್ಥಾನಗಳ ವಿವಿಧ ಉತ್ಸವಾದಿ ಸೇವೆಗಳು ಬಹು ಶ್ರೀಮಂತವಾಗಿ ನಡೆಯಲು ಸಹಾಯಕವಾದುವು. ಆದುದರಿಂದ ತಿರುಮಲೆ ದೇವಾಲಯದ ಅಭಿವೃದ್ಧಿಯಲ್ಲಿ ಕೃಷ್ಣದೇವರಾಯನ ಪಾತ್ರವು ಬಹುಗಣ್ಯವಾದುದಾಗಿದೆ.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.



# ತುಕಾರಾಮ

ಶ್ರೀಮತಿ ಪ್ರೇಮಲೀಲ
ನಾರಾಯಣಮೂರ್ತಿ

ಭಕ್ತಿಯೋಗದಲಿ ದೈವವ ತಲುಪಿದ
ತುಕಾರಾಮರಾ ಚರಿತೆಯನು
ಮುದದಲಿ ಪೇಳುವೆ ಕೇಳಿರಿ ಮಕ್ಕಳೆ
ಮನದಲಿ ನಲಿವನು ಹೊಂದುವಿರಿ ॥ ೧ ॥

ದೇಹುಕ್ಷೇತ್ರದಲಿ ಸದ್ದಂಪತಿಗಳ
ವರಶಿಶುವಾಗಿ ಜನಿಸುತಲಿ
ಜಗದೊಡೆಯನ ಸತಿ ರುಕ್ಮಿಣಿ ಹಸ್ತದಿ
ಶಿಶುವಿಗೆ ನಾಮಾಂಕಿತವಾಯ್ತಲ್ಲಿ ॥ ೨ ॥

ತಾಯ್ತಂದೆಗಳಾ ಅನುಮತಿಯಂತೆ
ರಖು, ಜೀಜಾ ಬಾಯಿಯರ
ಕೈಹಿಡಿಯುತಲಿ ಸಂಸಾರದ ಹೊರೆ
ಧರಿಸುತ ಬಾಳಲಿ ಅಡಿಯಿಟ್ಟ ॥ ೩ ॥

ತುಕಾರಾಮನಿಗೆ ಎಲ್ಲ ವಹಿಸುತ
ಮಾತಾ ಪಿತರು ಅಗಲಿದರು
ದಾರಿತೋರದಲೆ ವಿಠಲನ ನೆನೆಯುತ
ಧ್ಯಾನಮಗ್ನನಾಗಿರುತಿರಲು ॥ ೪ ॥

ದಿನಸಿಯ ಮಾರುವ ಯೋಚನೆ ಸ್ಫುರಿಸಿತು
ಹರಿಯುವ ಬುದ್ಧಿಯ ಆಳದಲಿ
ಹರಿಸ್ಮರಣದಿ ಮನ ನಿಯತ ಪ್ರವಹಿಸಿಲು
ವೃತ್ತಿಯೊಳವನತಿಯುಂಟಾಯ್ತು ॥ ೫ ॥

ಹೊಟ್ಟೆಯಕಟ್ಟುತ ರೋಗದಿ ಬಳಲುತ
ಹಿರಿಸತಿಸುತರು ಮರಣಿಸಲು
ವಿಠಲನ ನಾಮ ಸ್ಮರಣೆಯು ಮನದಲಿ
ಹಿಂದಿಗಿಂತಲೂ ದೃಢವಾಯ್ತು ॥ ೬ ॥

ಸಂಸಾರದಲಿ ವಿರಕ್ತನಾಗುತ
ಏಕಾಂತವ ನೊಂದನೆ ಬಯಸುತ್ತ
ಭಾಂಬನಾಥನ ಪರ್ವತವೇರಿ
ಧ್ಯಾನದಿ ದೈವವ ದರ್ಶಿಸಿದ ॥ ೭ ॥

ನದೀತೀರದಲಿ ದೈವದೆದುರಿನಲಿ
ಹುಚ್ಚನಂತೆ ತಾ ಕುಣಿಯುತಿರೆ
ರೈತನೋರ್ವನು ಹೊಲದ ಕಾವಲಿಗೆ
ನಿಯಮಿಸಿ ಊರಿಗೆ ತೆರಳಿದನು ॥ ೮ ॥

ಭಜನಾನಂದದಿ ಮೈಮರೆತಿರಲು
ಹೊಲದಲಿ ಕಾಳ್ಗಳು ಬರಿದಾಯ್ತು
ದೈವದೊಲುಮೆಯು ಕಾಳ್ಗಲ ತುಂಬಲು
ಭಕ್ತನ ಕೀರ್ತಿಯು ಪಸರಿಸಿತು ॥ ೯ ॥

ಶಿಥಿಲಗೊಂಡಿಹ ವಿಠ್ಠಲ ಗುಡಿಯನು
ಕಟ್ಟುವ ಯೋಜನೆ ಮೂಡಿರಲು
ಜನರ ನೆರವಿನಲಿ ಭಕ್ತನ ಇಚ್ಛೆಯ
ವಿಠಲನು ಮುಗಿಸಿ ಹರ್ಷಿಸಿದ ॥ ೧೦ ॥

ಪತಿಗುಣಿಸದೆ ತಾನುಣ್ಣೆನು ಎನುವ
ವ್ರತಕೈಗೊಂಡಿಹ "ಜೀಜಿ"ಯು
ಮನದಿ ದೈವವಾ ದೂಷಿಸಿ ನಡೆದಳು
ಪತಿಗಾಹಾರವ ನೀಡಲಿಕೆ ॥ ೧೧ ॥

ಪತಿಯು ಅಗಲಿಕೆಗೆ ಸತಿಬಹುನೋಯುತ
ದೇವರ ತೆಗಳುತ ಬರುತಿರಲು
ಕರುಣದಿ ವಿಠಲನು ಬುದ್ಧಿಯ ಪೇಳಿ
"ತುಕ" ನನು ಮನೆಗೆ ಕಳುಹಿದನು ॥ ೧೨ ॥

ಸ್ವಾರ್ಥರಹಿತ ಸದ್ಭಾವ ಹೃದಯದಲಿ
ಸತ್ಕರ್ಮದಿ ತನುವನು ಸವೆಸುತಿರೆ
ಎನಿತೊ ಪವಾಡಗಳರಿಯದೆ ನಡೆದು
ತುಕನ ಹಿರಿಮೆ ಹೆಚ್ಚಾಗುತಿರೆ ॥ ೧೩ ॥

ಲೋಕ ಕಲ್ಯಾಣಕೆ ಕೀರ್ತನೆ ರಚಿಸುವ
ಆಣತಿ ಭಕ್ತನಿಗಾಗಿರಲು
ದೇವರಿಚ್ಛೆಯೊಲು ರಚಿಸಿ ಹಾಡುತಿರೆ
ಭಕ್ತರಾನಂದವ ಹೊಂದಿದರು ॥ ೧೪ ॥

ಚಿಂತಾಮಣಿ ದೇವ ಪಂಡಿತನು
ತುಕಾರಾಮನು ಪರಿಕಿಸೆ ನಡೆತಂದ
ದೇವರೊಡನೆ ಸಖನೊಲು ಭುಜಿಸುವುದನು
ಕಂಡು ಗರ್ವಹಿಂಗಿ ಶರಣಾದ ॥ ೧೫ ॥

ರವಿಯೊಲು ಬೆಳಗಲು ಸಹಿಸದ ಹಲರು
ವಂಚನೆ ಬುದ್ಧಿಯ ಸಂಚಿನಲಿ
ಕೆಡುಕನೆಸಗಿದರು ಮುನಿಯದ ವಂದಿಸೆ
ಮಹಾತ್ಮನೆಂದಡಿಗೆರಗಿದರು ॥ ೧೬ ॥

ರಾಮೇಶ್ವರ ಭಟ್ಟನೆಂಬ ಪಂಡಿತನು
ತುಕನ ಕೀರ್ತಿಯನು ದ್ವೇಷಿಸಿ
ಕೀರ್ತನ ನಿರೋಧದಾಜ್ಞಾಪತ್ರವ
ದಿವಾನನಿಂದ ಹೊರಡಿಸಿದ ॥ ೧೭ ॥

ಭಟ್ಟನ ಮನದ ಇಂಗಿತವರಿತು
ಗ್ರಂಥವ ನೀರಲಿ ಮುಳುಗಿಸಲು
ತುಸುವೂ ನೆನೆಯದೆ ರಕ್ಷಿತವಾಗಿ
ಭಕ್ತನ ಬೇಗೆಯ ನೀಗಿಸಿತು ॥ ೧೮ ॥

ಕೀರ್ತನೆ ಕೇಳುವ ಶಿವಾಜಿ ಪ್ರಭುವನು
ಹಿಡಿಯಲು ರಿಪುಗಳು ಮುತ್ತಿರಲು
ಉಪಾಯದಿಂದಲಿ ಭಕ್ತ ಬಾಂಧವನು
ಶತ್ರುಸೈನ್ಯವನು ಸದೆಬಡಿದ ॥ ೧೯ ॥

ಜ್ಞಾನ ದೇವನ ಸಮಾಧಿ ಬಳಿಯಲಿ
ಭಕ್ತ ವೃಂದವು ನೆರೆದಿರಲು
ತನುವನಪ್ಪಿ ಕುಳಿತ ಹಕ್ಕಿಗಳು
ಅದ್ವೈತನು ಇವನೆಂದರುಹಿದವು ॥ ೨೦ ॥

ತನುಸಹಿತ ವೈಕುಂಠ ತಲುಪಿದಾ
ತುಕಾರಾಮನಾ ಚರಿತೆಯನು
ಗಂಗೆ ಹರಕೆಯಲಿ ರಚಿಸಿ ಹಾಡುತಾ
ದೇವನಡಿಗಳಿಗೆ ಅರ್ಪಿಸಿಹೆ ॥ ೨೧ ॥



# ಮಹರ್ಷಿ ದಧೀಚಿ

ಈಗ ನಾವು ಅತ್ಯಂತ ಉದಾರನೂ, ಜ್ಞಾನಿಯೂ ಆದ ಋಷಿಯ ಕತೆ ತಿಳಿಯೋಣ. ಆ ಕಾಲದಲ್ಲಿ ಮಧು ವಿದ್ಯೆಯನ್ನು ತಿಳಿದಾತ ಎಲ್ಲರಿಗಿಂತ ದೊಡ್ಡವನೆನಿಸಿ ಕೊಳ್ಳುತ್ತಿದ್ದ. ಮಹರ್ಷಿ ದಧೀಚಿ ಇದನ್ನು ತಿಳಿದವ. ಈತನ ನಿಜವಾದ ಹೆಸರು ದಧ್ಯಚಿ ಅಥರ್ವಣನೆಂದು, ಒಮ್ಮೆ ಈತನ ಆಶ್ರಮಕ್ಕೆ ಇಂದ್ರ, ಮಧುವಿದ್ಯೆ ಕಲಿಯಲು ಬಂದ. ಆಶ್ರಮದಲ್ಲಿ ಹತ್ತು ಸಾವಿರ ವಿದ್ಯಾರ್ಥಿಗಳು ಓದುತ್ತಿದ್ದರು. ಎಲ್ಲರನ್ನೂ ಋಷಿ ಗುರುತಿಸುತ್ತಿದ್ದ. ಹೊಸಬನನ್ನು ಕಂಡು ಕೇಳಿದ. ' ನಿನ್ನ ಹೆಸರೇನು, ನಿನಗೇನು ಬೇಕು? '

ಇಂದ್ರನು ತನ್ನ ಪರಿಚಯ ಹೇಳಿ "ನಾನು ಮಧು ವಿದ್ಯೆ ಕಲಿಯಲು ಬಂದಿರುವೆ"ನೆಂದ.

ಮಹರ್ಷಿ ಯೋಚನೆಗೀಡಾದ. ಈ ವಿದ್ಯೆಗೆ ಅಧಿಕಾರವಿರುವವನೇ ಅರ್ಹ. ಇಂದ್ರ ಇದಕ್ಕೆ ಅರ್ಹನಲ್ಲ. ಆದರೂ ಇಂದ್ರನಿಗೆ ವಿದ್ಯಾದಾನ ಮಾಡಿ – ನೀನು ಭೋಗಿ, ನಿನಗೆ ಈ ವಿದ್ಯೆ ಫಲಿಸದು–ಎಂದು ಹೇಳಿದ. "ಹಾಗಾದರೆ, ನೀವು ಬೇರಾರಿಗಾದರೂ ಈ ವಿದ್ಯೆ ಕಲಿಸಿದರೆ ನಿಮ್ಮ ಶಿರ ಹಾರಿ ಬಿಡುವುದು"–ಎಂದು ಇಂದ್ರ ಶಾಪವಿತ್ತ.

ಇಂದ್ರನ ಶಾಪ ಕೇಳಿ ಋಷಿ ತುಸುವೂ ಹೆದರಲಿಲ್ಲ.

ಬಹಳ ದಿನಗಳ ನಂತರ ದೇವತೆಗಳ ವೈದ್ಯರು ಅಶ್ವಿನೀ ಕುಮಾರರು ಆಶ್ರಮಕ್ಕೆ ಬಂದು ತಮಗೆ ಮಧು ವಿದ್ಯೆ ಕಲಿಸಬೇಕೆಂದು ಬೇಡಿದರು.

"ನೀವು ವಿದ್ಯೆಗೆ ಅರ್ಹರು. ನಿಮಗೆ ಕಲಿಸುತ್ತೇನೆ". ಎಂದು ಹೇಳಿದ ಋಷಿ ಇಂದ್ರನ ಶಾಪದ ವಿಷಯವನ್ನು ಹೇಳಿದ.

ಅಶ್ವನೀ ಕುಮಾರರು ಖ್ಯಾತ ವೈದ್ಯರು. ಸತ್ತವನನ್ನು ಬದುಕಿಸಬಲ್ಲರು. ಅವರೆಂದರು "ನಾವು ನಿಮ್ಮ ನಿಜವಾದ ತಲೆಯನ್ನು ಕತ್ತರಿಸಿ ಜೇರೆ ಇಟ್ಟು ಆ ಜಾಗದಲ್ಲಿ ಕುದುರೆಯ ತಲೆಯನ್ನು ಇರಿಸುವೆವು. ನಮಗೆ ವಿದ್ಯಾದಾನ ಮಾಡಿದ ನಂತರ ನಿಮ್ಮ ತಲೆ ಹಾರುವುದು. ಆ ಬಳಿಕ ನಾವು ನಿಮ್ಮ ನಿಜವಾದ ತಲೆ ತಂದಿರಿಸುವೆವು".

ಋಷಿ ಒಪ್ಪಿದ. ಅಶ್ವನೀ ಕುಮಾರರು ಹಾಗೇ ಮಾಡಿದರು. ಅವರು ಮಧು ವಿದ್ಯೆ ಕಲಿತ ನಂತರ ಇಂದ್ರನ ಶಾಪದಂತೆ ಋಷಿಯ ಕುದುರ ತಲೆ ಕತ್ತರಿಸಿ ಬಿತ್ತು. ನಂತರ ಅಶ್ವಿನೀ ಕುಮಾರರು ಋಷಿಯ



ನಿಜವಾದ ತಲೆಯನ್ನಿರಿಸಿ, ಸಂತಸದಿಂದ ಮರಳಿದರು. ಋಷಿಯೂ ಪ್ರಸನ್ನನಾದ. ಅಧಿಕಾರೀ ವ್ಯಕ್ತಿಗೆ ವಿದ್ಯೆ ಕಲಿಸಲಾಗಿತ್ತು.

ವಿಷಯ ತಿಳಿದ ಇಂದ್ರ ಲಜ್ಜಿತನಾಗಿ ಕ್ಷಮೆ ಯಾಚಿಸಲು ಆಶ್ರಮಕ್ಕೆ ಬಂದ. ಋಷಿ ತುಂಬ ಉದಾರಿ. ಆತ ಇಂದ್ರನನ್ನು ಕ್ಷಮಿಸಿ, ಆತನಿಗೆ ನಾನಾ ರೀತಿಯಲ್ಲಿ ಬುದ್ಧಿವಾದ ಹೇಳಿದ. ಇಂದ್ರನ ಹೃದಯದಲ್ಲಿನ ಕೊಳೆ ಇದರಿಂದ ಹರಿದು ಹೋಯಿತು. ಆತ ಋಷಿಯನ್ನು ಆದರಿಸ ತೊಡಗಿದ.

ಬಹಳ ದಿನಗಳ ನಂತರ ದೇವತೆಗಳ ನಗರಕ್ಕೆ ದಾನವರ ಆಕ್ರಮಣವಾಯ್ತು. ದಾನವರ ಮುಖಂಡ ವೃತ್ರಾಸುರ ಭಯಂಕರನೂ ಬಲಶಾಲಿಯೂ ಆಗಿದ್ದ. ಆತ ಎಲ್ಲ ದೇವತೆಗಳನ್ನು ಸೋಲಿಸಿ, ರಾಜ್ಯಕೋಶಗಳನ್ನು ಅಪಹರಿಸಿದ. ದೇವತೆಗಳು ಚೆಲ್ಲಾಪಿಲ್ಲಿಯಾದರು. ದುಃಖಿತನಾದ ಇಂದ್ರ, ಋಷಿಯ ಆಶ್ರಮಕ್ಕೆ ಬಂದಾಗ ಎಲ್ಲ ತಿಳಿದ ಋಷಿ ಹೇಳಿದ, "ಆ ನನ್ನ ಕುದುರೆಯ ತಲೆ ಕುರುಕ್ಷೇತ್ರದ ಬಳಿ ಒಂದು ಕೆರೆಯಲ್ಲಿ ಬಿದ್ದಿದೆ. ಅದು ಬಹಳ ಕಠೋರವಾಗಿದೆ. ಅದನ್ನು ನೀನು ತಾ ಅದರಿಂದ ವಜ್ರ ತಯಾರಿಸಿ ವೃತ್ರಾಸುರನೊಡನೆ ಹೋರಾಡು – ನಿನಗೆ ಜಯವಾಗುತ್ತದೆ" ಎಂದ.

ಇಂದ್ರನು ಹಾಗೆಯೇ ಮಾಡಿ ಕುದುರೆಯ ತಲೆಯಿಂದ ವಜ್ರಾಯುಧವನ್ನೂ, ಇನ್ನೂ ಅನೇಕ ಆಯುಧಗಳನ್ನೂ ನಿರ್ಮಿಸಿ ವೃತ್ರಾಸುರನನ್ನು ಕೊಂದ.

ನೋಡಿ ಮಹರ್ಷಿ ಎಷ್ಟು ಉದಾರ; ತನಗೆ ಶಾಪವಿತ್ತು ಕಿರುಕುಳವಿತ್ತವನನ್ನು ಆತ ರಕ್ಷಿಸಿದ.

ಇದೇ ಕತೆ ಇನ್ನೊಂದು ತರದಲ್ಲಿಯೂ ಇದೆ. ಇಂದ್ರನು ದಧೀಚಿಯ ಬಳಿ ಸಹಾಯ ಬೇಡಲು ಹೋದಾಗ ಆತ "ನೀನು ನನ್ನ ಎಲುಬಿನಿಂದ ಆಯುಧ ಮಾಡು .." ಎಂದ. ಈ ಸಲಹೆಯನ್ನು ಬ್ರಹ್ಮನೇ ಇಂದ್ರನಿಗೆ ನೀಡಿದ್ದ. ಇದನ್ನು ತಿಳಿದ ದಧೀಚಿ–"ಹಾಗಾದರೆ ಇನ್ನೂ ಒಳ್ಳೆಯದು. ಈ ಶರೀರ ಒಂದಲ್ಲ ಒಂದು ದಿನ ನಷ್ಟವಾಗುತ್ತದೆ. ಇದಕ್ಕಿಂತ ಹೆಚ್ಚಿನದೇನಾಗಬೇಕು? ನನ್ನ ಎಲುಬು ನಿನಗೆ ಉಪಯುಕ್ತವಾದರೆ ಅವಶ್ಯ ಕೊಡುವೆ"– ಹೀಗೆಂದ ಋಷಿ ಸಮಾಧಿಸ್ಥನಾದ. ಆತನ ಶರೀರವನ್ನು ಕಾಡು ಹಸುಗಳು ನೆಕ್ಕತೊಡಗಿದವು.

**' ರಸಿಕ ಪುತ್ತಿಗೆ '**

ಹೀಗೆ ನೆಕ್ಕಿ ಎಲುಬು ಮಾತ್ರ ಉಳಿದಾಗ ಇಂದ್ರ ಆದರಿಂದ ವಜ್ರಾಯುಧ ಮಾಡಿದ–ಆದರಿಂದ ವೃತ್ರಾಸುರನ ವಧೆಯಾಯಿತು.

ಇನ್ನು ಒಂದು ಕತೆ ಹೀಗೂ ಹೇಳುತ್ತದೆ:

ಒಮ್ಮೆ ದೇವತೆಗಳು ತಮಲ್ಲಿದ್ದ ಆಯುಧ ವನ್ನು ದಧೀಚಿಯ ಆಶ್ರಮದಲ್ಲಿಟ್ಟರು ಬಹಳ ದಿನಗಳಾದರೂ ಅವರು ಕೊಂಡು ಹೋಗಲಿಲ್ಲ. ಆಗ ಆ ಅಸ್ತ್ರಗಳ 'ತೇಜ' ವನ್ನು ಮಹರ್ಷಿ ಅರೆದು ಕುಡಿದನಂತೆ. ವೃತ್ರಾಸುರನನ್ನು ಕೊಲ್ಲಲು ಇಂದ್ರ ಆಯುಧ ಹುಡುಕಿ ಬಂದಾಗ ಅಲ್ಲೇನೂ ಇರಲಿಲ್ಲ. ಆಗ ಋಷಿ 'ನನ್ನ ಎಲುಬಿನಿಂದ ನೀನು ಅಸ್ತ್ರ ಶಸ್ತ್ರಗಳನ್ನು ಮಾಡಿ ದಾನವ ರನ್ನು ಕೊಲ್ಲು' ಎಂದನಂತೆ.

ಕತೆಗಳು ಇನ್ನೂ ಇವೆ. ಹಲವನ್ನು ನಂಬಲಾಗುವುದಿಲ್ಲ. ಆದರೆ ಅರ್ಥ ಮಾತ್ರ ಸ್ಪಷ್ಟ. ಒಂದನೆಯದು: ನಮಗೆ ಅಪಕಾರ ಮಾಡಿದವನಿಗೂ ಸಂದರ್ಭ ಬಿದ್ದರೆ ನಾವು ಉಪಕಾರವನ್ನೇ ಮಾಡಬೇಕು.

ಎರಡನೆಯದು: ಪುರಾತನ ಕಾಲದಲ್ಲಿ ತಪೋವನದ ಋಷಿಗಳು ಕೇವಲ ಹವನ, ಹೋಮ, ಮಂತ್ರಪಾಠಗಳಷ್ಟೇ ತಿಳಿದವ ರಲ್ಲದೆ ಯುದ್ಧ ವಿದ್ಯೆಯಲ್ಲಿಯೂ ನಿಪುಣರಾ ಗಿದ್ದರು. ಹಲವಾರು ರೀತಿಯ ಆಯುಧಗಳ ರಚನೆಯೂ ಅವರಿಗೆ ತಿಳಿದಿತ್ತು. ದಧೀಚಿ ವಜ್ರಾಯುಧವೆಂಬ ಅಸ್ತ್ರ ಮಾಡಿ ಇಂದ್ರ ನಿಗಿತ್ತ. ಇಂದ್ರ ಆದರಿಂದ ವೃತ್ರಾಸುರ ನನ್ನು ಕೊಂದು ರಾಜ್ಯ ಮರಳಿ ಪಡೆದ.

ಈ ರೀತಿ ದಧೀಚಿ ದಾನಿಯೂ, ಜ್ಞಾನಿಯೂ ಆಗಿದ್ದ. ಆತನ ಮದುವೆ ಅಗಸ್ತ್ಯನ ಮಡದಿ ಲೋಪಾಮುದ್ರೆಯ ತಂಗಿ ಸುವರ್ಚಳ ಜೊತೆಗಾಯಿತು. ಅವನಿಗೆ ಇಬ್ಬರು ಮಕ್ಕಳಿದ್ದರು. ಸಾರಸ್ವತ ಮತ್ತು ಪಿಪ್ಪಲಾದ. ಇಬ್ಬರೂ ತಂದೆಯಂತೆ ತಪಸ್ವಿ ಗಳೂ, ಜ್ಞಾನಿಗಳೂ ಆಗಿದ್ದರು.

---

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

# ಸಾಧನ ಸಪ್ತಕ

ಶ್ರೀ ಶಂಕರಾಚಾರ್ಯರು ಮೋಕ್ಷಾರ್ಥಿಯಾದವನಿಗೆ ಸಾಧನ ಚತುಷ್ಟಯಗಳಾದ ನಿತ್ಯಾನಿತ್ಯ ವಸ್ತು ವಿವೇಕ, ಶಮದಮಾದಿ ಗುಣ ಸಂಪತ್ತು, ಇಹಾಮುತ್ರ ಫಲಭೋಗ ವಿರಾಗ, ಮತ್ತು ಮುಮುಕ್ಷುತ್ವ ಇವುಗಳು ಹೇಗೆ ಅತ್ಯಾವಶ್ಯಕ - ಎಂದು ಹೇಳಿದ್ದಾರೋ, ಅದೇ ರೀತಿ ಶ್ರೀರಾಮಾನುಜರು ತಮ್ಮ ಶ್ರೀಭಾಷ್ಯದಲ್ಲಿ, ಸಾಧನ ಸಪ್ತಕಗಳು ಮುಮುಕ್ಷುವಿಗೆ ಅಗತ್ಯವೆಂದು ವಿವರಿಸಿದ್ದಾರೆ. ಈ ಸಾಧನ ಸಪ್ತಕಗಳು ಯಾವುವೆಂದರೆ, ವಿವೇಕ, ವಿಮೋಕ, ಅಭ್ಯಾಸ, ಕ್ರಿಯಾ, ಕಲ್ಯಾಣ, ಅನವಸಾದ ಮತ್ತು ಅನುದ್ಧರ್ಷ.

೧ ವಿವೇಕ: ಸಾಮಾನ್ಯವಾಗಿ ರೂಢಿಯಲ್ಲಿ ವಿವೇಕ ಎಂದರೆ ಯುಕ್ತಾಯುಕ್ತತೆಯ ಬಗ್ಗೆ ಇರುವ ಜ್ಞಾನ ಎಂಬರ್ಥವಿದೆ. ಆದರೆ ಶ್ರೀರಾಮಾನುಜರು ವಿವೇಕದ ಬಗ್ಗೆ ಹೊಸ ಅರ್ಥವನ್ನು ನೀಡಿದ್ದಾರೆ. "ಜಾತ್ಯಾಶ್ರಯ ನಿಮಿತ್ತಾದ್ದುಷ್ಟಾದನ್ನಾತ್ ಕಾಯಶುದ್ಧಿಃ ವಿವೇಕಃ"– ಮುಮುಕ್ಷುವು ಸ್ವೀಕರಿಸುವ ಅನ್ನವು ಕಲುಷಿತವಾಗಿರದೆ ಶುದ್ಧವಾಗಿರಬೇಕು ಉಪನಿಷತ್ತಿನಲ್ಲಿ "ಆಹಾರ ಶುದ್ಧೌ ಸತ್ವ ಶುದ್ಧಿಃ ಸತ್ವ ಶುದ್ಧೌ ಧ್ರುವಾ ಸ್ಮೃತಿಃ" ಎಂದಿದೆ. ಪರಮಾತ್ಮನ ನಿರಂತರ ಧ್ಯಾನ ಒದಗಬೇಕಾದರೆ, ಆಹಾರ ಶುದ್ಧಿ ಅತ್ಯಾವಶ್ಯಕ. ಮೋಕ್ಷಾರ್ಥಿಯಾದವನು ಎಲ್ಲಾ ಕಡೆಯಲ್ಲಿಯೂ ಆಹಾರ ಸ್ವೀಕರಿಸಬಾರದು. ಕೇವಲ ಪ್ರಾಣಾಪಾಯ ಒದಗಿದ ಸಂದರ್ಭದಲ್ಲಿ ಮಾತ್ರ ಅನ್ನವನ್ನು ದೇಶ, ಕಾಲ ಇತ್ಯಾದಿಗಳನ್ನು ನೋಡದೆ ಸ್ವೀಕರಿಸಬಹುದೆಂದು ಬ್ರಹ್ಮ ಸೂತ್ರದ "ಸರ್ವಾನ್ನಾನುಮತಿ" ಎಂಬ ಅಧಿಕರಣದಲ್ಲಿ ಎಲ್ಲಾ ಆಚಾರ್ಯರು ಒಮ್ಮತದಿಂದ ಹೇಳಿದ್ದಾರೆ.

೨. ವಿಮೋಕ: "ವಿಮೋಕಃ ಕಾಮಾನಭಿಷ್ವಂಗಃ" ವಿಮೋಕವೆಂದರೆ, ಆಸೆಗಳಿಂದ ಮುಕ್ತನಾಗಿರುವುದು. ಮನಸ್ಸಿನಲ್ಲಿ ವಿಧ ವಿಧವಾದ ಕಾಮನೆಗಳು ತುಂಬಿಕೊಂಡಿದ್ದರೆ, ಚಿತ್ತ ಶಾಂತಿ ಇರುವುದಿಲ್ಲ. 'ಶಾಂತ ಉಪಾಸೀತ' ಎಂಬುದಾಗಿ ಶ್ರುತಿ ವಚನ.

೩. ಅಭ್ಯಾಸ: ಚಿತ್ತೈಕಾಗ್ರತೆಯನ್ನು ಅಭ್ಯಾಸದಿಂದಲೇ ಪಡೆಯಬೇಕಲ್ಲದೇ ಬೇರೆ ಯಾವ ಮಾರ್ಗದಿಂದಲೂ ಸಾಧ್ಯವಿಲ್ಲ. "ಆರಂಭೇಣ ಸಂಶೀಲನಂ ಪುನಃ ಪುನರಭ್ಯಾಸಃ" ಎಂದಿದ್ದಾರೆ ಆಚಾರ್ಯರು. ಗೀತೆಯಲ್ಲೂ ಪರಮಾತ್ಮನು "ಅಭ್ಯಾಸೇನ ಚ ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ" ಎಂದು ಅಭ್ಯಾಸವನ್ನು ಒತ್ತಿ ಹೇಳಿದ್ದಾನೆ. ಶ್ರೀದ್ರಮಿಡಾಚಾರ್ಯರು ಸಹ "ಸದಾ ತದ್ಭಾವಭಾವಿತಃ" ಎಂಬುದಾಗಿ ಹೇಳಿದ್ದಾರೆ.

---

## 'ನಿರ್ಮಲಾಪ್ರಿಯ"

---

೪. ಕ್ರಿಯಾ: "ಪಂಚ ಮಹಾ ಯಜ್ಞಾದ್ಯನುಷ್ಠಾನಂ ಶಕ್ತಿತಃ ಕ್ರಿಯಾ ಇತಿ" ಎಂಬುದಾಗಿ ಆಚಾರ್ಯರು ವ್ಯಾಖ್ಯಾನ ನೀಡಿದ್ದಾರೆ, ತನ್ನ ಶಕ್ತಿಗನುಗುಣವಾಗಿ ಪಂಚ ಮಹಾಯಜ್ಞಗಳನ್ನು ನಡೆಸುವುದು. ದೇವಯಜ್ಞ, ವಿಶ್ವಯಜ್ಞ, ಭೂತಯಜ್ಞ ಇತ್ಯಾದಿಗಳು.

೫. ಕಲ್ಯಾಣ, ಕೆಲವು ವಿಶೇಷಣಗಳನ್ನು ಆಚಾರ್ಯರು ಹೇಳಿದ್ದಾರೆ. ಸತ್ಯ, ಆರ್ಜವ, ದಯಾ, ದಾನ, ಅಹಿಂಸೆ, ಅನಭಿಧ್ಯಾಃ, ಇವು ಕಲ್ಯಾಣ ಎಂಬುದಾಗಿ. ಶ್ರುತ ಪ್ರಕಾಶಿಕಾಚಾರ್ಯರಾದ ಶ್ರೀ ಸುದರ್ಶನ ಸೂರಿಗಳು ಸುಂದರವಾದ ವಿವರಣೆಗಳನ್ನು ನೀಡಿದ್ದಾರೆ. "ಸತ್ಯಂ ಭೂತಹಿತಂ, ಆರ್ಜವಂ ಮನೋವಾಕ್ಕಾಯಾ ನಾಮ ಏಕರೂಪ್ಯಂ, ದಯಾ ಸ್ವಾರ್ಥನಿರಪೇಕ್ಷ ಪರದುಃಖ ಅಸಹಿಷ್ಣುತ್ವಂ, ಅಹಿಂಸಾ ಕರಣತ್ರಯೇಣೇತಿ ಪರಪೀಡಾ ನಿವೃತ್ತಿಃ, ದಾನಂ ಲೋಭರಾಹಿತ್ಯಂ, ಅನಭಿಧ್ಯಾ, ಪರಕೃತ ಅಪಕಾರ ಚಿಂತಾರಾಹಿತ್ಯಂ" ಇತ್ಯಾದಿ

೬. ಅನವಸಾದ: ಅನವಸಾದ ಎಂದರೆ, ದೇಶ ಕಾಲ ವೈಗುಣ್ಯಗಳಿಂದ ಮನುಷ್ಯನಿಗೆ ಒದಗಬಹುದಾದ ದುಃಖ ಮತ್ತು ಆದರ ಸತತ ಚಿಂತನೆಯಿಂದ ಕುಗ್ಗದೆ ಇರುವ ಚಿತ್ತ ಸ್ವಾಸ್ಥ್ಯ ಹೊಂದುವಿಕೆ ಎಂದರ್ಥ. 'ದೇಶಕಾಲ ವೈಗುಣ್ಯಾತ್ ಶೋಕವತ್ವಾತ್ ಅನುಸ್ಮೃತೇಶ್ಚ ತಜ್ಜಂ ದೈನ್ಯಂ ಅಭಾಸ್ವರತ್ವಂ ಮನಸೋ ಅವಸಾದಃ ಇತಿ ತದ್ವಿಪರ್ಯಯೋ ಅನವಸಾದಃ" ಎಂದು ಶ್ರೀಭಾಷ್ಯದಲ್ಲಿ ವಿವರಣೆ ಇದೆ. ಅಂದರೆ "ಮುಮುಕ್ಷುವು ಧೈರ್ಯಶಾಲಿಯಾಗಿರಬೇಕು" ಎಂಬುದು ಒಟ್ಟಾರೆ ಅರ್ಥ. ಕಠೋಪನಿಷತ್ತಿನಲ್ಲಿಯೂ "ನಾಯಮಾತ್ಮಾ ಬಲಹೀನೇನ ಲಭ್ಯಃ" ಎಂದಿದೆ. ಬಲಹೀನ ಎಂದರೆ ಮನೋಬಲಹೀನ ಎಂದರ್ಥ.

೭. ಅನುದ್ಧರ್ಷ: 'ಅತಿ ಸಂತೋಷಶ್ಚ ವಿರೋಧಿ ಇತಿ ಅನುದ್ಧರ್ಷಃ,' ಸುಖ ಪ್ರಾಪ್ತಿಯಾದಾಗಲೂ ಅತಿ ಸಂತೋಷ ಹೊಂದಕೂಡದು. "ಶಾಂತೋ ದಾಂತಃ" ಎಂಬುದಾಗಿ ಉಪನಿಷದ್ವಾಕ್ಯವಿದೆ. "ಅತಿ ಸರ್ವತ್ರ ವರ್ಜಯೇತ್" ಎಂದು ಸುಭಾಷಿತದ ಹೇಳಿಕೆಯುಂಟು.

ಈ ಎಲ್ಲಾ ಗುಣಗಳು ಮುಮುಕ್ಷುವಿನಲ್ಲಿದ್ದರೆ ಮಾತ್ರ ಅವನಿಂದ ಬ್ರಹ್ಮ ಸಾಕ್ಷಾತ್ಕಾರ ಪಡೆಯಲು ಸಾಧ್ಯ ಎಂಬುದು ಶ್ರೀ ರಾಮಾನುಜರ ಸ್ಪಷ್ಟ ಅಭಿಪ್ರಾಯ.

# ಪುಸ್ತಕ ವಿಮರ್ಶೆ

# ನಾಲ್ಕು ಯಕ್ಷಗಾನ ಪ್ರಸಂಗಗಳು

ಕಿರೇಕ್ಕಾಡು ಮಾಸ್ತರ್ ವಿಷ್ಣು ಭಟ್‌ರವರ ನಾಲ್ಕು ಯಕ್ಷಗಾನ ಕೃತಿಗಳನ್ನು ಕುರಿತು ಇಲ್ಲಿ ವಿವೇಚಿಸಲಾಗಿದೆ ವಿಷ್ಣುಭಟ್ಟರು ಸ್ವತಃ ಕವಿಗಳು, ಕಲಾವಿದರು, ಅರ್ಥದಾರಿಗಳು ಹಾಗೂ ಯಕ್ಷಗಾನ ಕಲಾವಿದರಿಗೆ ದೀಪಧಾರಿಗಳೂ ಆಗಿರುವರು. ಸಾರ್ವಕಾಲಿಕ ಜೀವನ ಮೌಲ್ಯಗಳಿಂದ, ಚಿರಂತನವಾದ ಸತ್ಯದಿಂದ ಕೂಡಿದ, ಕಥಾಸಾಗರಗಳಾದ ಪುರಾಣ ಗ್ರಂಥಗಳಿಂದ ನಾಲ್ಕು ಕಥಾವಿಷಯಗಳನ್ನಾರಿಸಿಕೊಂಡು 'ಶಿವನಾಮ ಮಹಿಮೆ', 'ಕನಕಲೇಖಾ', 'ಸೀತಾ ಪರಿತ್ಯಾಗ', ಮತ್ತು 'ಕಲ್ಪಸುಂದರಿ ಕಲ್ಯಾಣ' ಎಂಬ ನಾಲ್ಕು ಯಕ್ಷಗಾನ ಪ್ರಸಂಗಗಳನ್ನು ರಚಿಸಿದ್ದಾರೆ.

ಶಿವನಾಮ ಮಹಿಮೆ: ಈ ಪ್ರಸಂಗಕ್ಕೆ ಮತ್ತೊಂದು ಹೆಸರು 'ಶಿವಭಕ್ತ ಸುಪ್ರಿಯ'. ಕನ್ನಡದ ಸೇವೆಯೆಂದು ರಚಿಸಿರುವ ಈ ಯಕ್ಷಗಾನವೊಂದು ಸರಳ ಸುಂದರ ಸಂಗೀತಮಯವಾದ ಪದ್ಯಕಾವ್ಯ. ಕಥೆಯ ಮೂಲ ಶಿವ ಪುರಾಣ. ಶಿವನಾಮ ಮಹಿಮೆ ಇದಾದರೂ ವಿಷ್ಣುವಿನ ಸ್ಮರಣೆಯೂ ಇಲ್ಲಿದೆ. ಶಿವನ ಆಧಿಕ್ಯವನ್ನಿಲ್ಲಿ ಎತ್ತಿ ಹಿಡಿಯಲಾಗಿದೆ. ಇಂದ್ರಾದಿ ದೇವತೆಗಳ ಭೋಗ್ಯಭಾಗ್ಯಗಳನ್ನು ಅಪಹರಿಸಲು ಯತ್ನಿಸಿದ ವಿಂಧ್ಯಾಪುರದ ಮೂಢಾಸುರನ ಸೋಲು, 'ಖುಷಿಕ'ಳೆಂಬ ವಿಧವಾ ಬ್ರಾಹ್ಮಣ ಸ್ತ್ರೀಯನ್ನು ಬಲವಂತ ಮಾಡಲು ಹೋದ ಮೂಢಾಸುರನನ್ನು ಶಿವನು ಸಂಹರಿಸಿದ್ದು; ದಾರುಕಾಪುರದ ದಾರುಕಾಸುರನು ತನ್ನ ಕಾಂತೆಯ ಸಲಹೆಯಂತೆ ಮುನಿಜನರ ಯಜ್ಞಗಳನ್ನು ನಾಶ ಮಾಡಿ ಅವರುಗಳನ್ನು ಹಿಂಸಿಸಿದ್ದು, ಶೀಲವತಿಯೆಂಬ ಬ್ರಾಹ್ಮಣ ಸ್ತ್ರೀಯನ್ನು ಬಲಾತ್ಕರಿಸ ಹೋದದ್ದು, ಮೌನಿನಾಥನ ಶಾಪಕ್ಕೆ ಅಂಜಿ ರಾಕ್ಷಸರು ಸಾಗರ ದ್ವೀಪ ಸೇರಿದ್ದು, ಸಮುದ್ರಯಾನ ಹೊರಟ ವಣಿಕ ಶಿವಭಕ್ತ ಸುಪ್ರಿಯನನ್ನು ದಾರುಕಿಯು ಮೋಸದಿಂದ ಬಯಸಿ ಯಶಸ್ವಿಯಾಗದೆ ಅವನನ್ನು ಬಂಧಿಸಿದ್ದು, ಶಿವನನ್ನು ದಾರುಕನು ಜರಿದದ್ದು, ಶಿವಸ್ತೋತ್ರ, ಶಿವಪ್ರತ್ಯಕ್ಷನಾದದ್ದು ಶಿವನು ಚರರಾದ ವೀರಭದ್ರ, ಕಾಲಭೈರವ, ಶೃಂಗಿ ಭಂಗಿಯರಿಂದ ದಾರುಕಾದಿ ದೈತ್ಯರ ಸಂಹಾರ, ದಾರುಕಿಗೆ ಉಪದೇಶ, ಸುಪ್ರಿಯನಿಗೆ ಅನುಗ್ರಹ ಇವೇ ಮೊದಲಾದ ಕಥಾವಿಷಯಗಳೂ ಇಲ್ಲಿ ಸಂಭಾಷಣೆಯ ರೂಪದಲ್ಲಿ ಮೂಡಿ ಬಂದಿವೆ. ಈ ಪ್ರಸಂಗವು 26 ಪಾತ್ರಗಳಿಂದ ಕೂಡಿದೆ. ಇಲ್ಲಿ ಬರುವ ಯುದ್ಧ ಸಂಭಾಷಣೆಗಳು ಚುರುಕಾಗಿದ್ದು ಮಾನವ ಸಹಜ ಮಾತಿನ ಸ್ಪರ್ಶದಿಂದ ಕೂಡಿದೆ. ಇಲ್ಲಿನ ಭಾಷೆಯಲ್ಲಿ ವಿರಳ ರೂಪದಲ್ಲಿ ಕ್ಲಿಷ್ಟವಾಗಿದ್ದು ಉಳಿದಂತೆ ಬಹುಪಾಲು ಸರಳವಾಗಿದೆ.

ಶಿವನಾಮ ಮಹಿಮೆ
ಕನಕಲೇಖಾ
ಸೀತಾ ಪರಿತ್ಯಾಗ
ಕಲ್ಪಸುಂದರಿ ಕಲ್ಯಾಣ
ಲೇಖಕರು, ಪ್ರಕಾಶಕರು:
ಕಿರೇಕ್ಕಾಡು ಮಾಸ್ತರ್ ವಿಷ್ಣು ಭಟ್ಟ,
ಕಾಸರಗೋಡು.

ಕನಕಲೇಖಾ: ಚಾರಿತ್ರಿಕ ವಸ್ತುವಿನಿಂದ ಕೂಡಿದ (ಪುರಾಣಗಳಲ್ಲಿ ಹೇಳಲ್ಪಟ್ಟ) ಪ್ರಸಂಗವಿದು. ಹನ್ನೆರಡು ಪಾತ್ರಗಳಿಂದ ಕೂಡಿದೆ. ವಾಮದೇವ ಮಹರ್ಷಿಗಳಿಂದ ಶಿಕ್ಷಣಪಡೆದ ಮಗಧ ಮಂತ್ರಿ ಸುಮಂತ್ರನ ಮಗ ಮಂತ್ರಗುಪ್ತನು ದೇಶ ಸಂಚಾರ ಮಾಡುತ್ತಾ ಕಳಿಂಗ ದೇಶಕ್ಕೆ ತೆರಳಿ ಸ್ಮಶಾನವೊಂದರ ಬಳಿ ವಿಶ್ರಮಿಸುತ್ತಿರಲು, ಭೈರವನ ಆರಾಧಕನಾದ ಮಾಂತ್ರಿಕನೋರ್ವನು ಕಳಿಂಗ ರಾಜ ಕರ್ದನನ ಮಗಳಾದ ಕನಕಲೇಖೆಯನ್ನು ಹೋಮಕುಂಡಕ್ಕೆ ಬಲಿಕೊಡುತ್ತಿರಲು, ಅವನಿಂದ ಕನಕಲೇಖೆಯನ್ನು ಪಾರುಮಾಡುವನು. ಮಾಂತ್ರಿಕನ ಸೇವಕ ಕಿಂಕರಾಸುರನನ್ನು ತನ್ನ ವಶಮಾಡಿಕೊಳ್ಳುವನು ಮಂತ್ರಗುಪ್ತ. ಕನಕಲೇಖೆ–ಮಂತ್ರಗುಪ್ತರಲ್ಲಿ ಪ್ರಣಯಾಂಕುರವಾಗುವುದು ಒಮ್ಮೆ ಸಮುದ್ರ ವಿಹಾರಾರ್ಥ ಹೊರಟ ಕರ್ದನನನ್ನು ಆಂಧ್ರರಾಜ 'ಜಯಸಿಂಹ'ನು ಸೋಲಿಸಿ ಕನಕಲೇಖೆಯನ್ನು ಕೊಂಡೊಯ್ಯುವನು, ಇದನ್ನು ತಿಳಿದ ಮಂತ್ರಗುಪ್ತನು ಕಿಂಕರಾಸುರನನ್ನು ಕನಕಲೇಖೆಯ ಸಹಾಯಕ್ಕೆ ಆಂಧ್ರಕ್ಕೆ ಕಳುಹಿಸಿ, ಕರ್ದನನ ಸೇನಾಪತಿಯಾಗಿ ಜಯಸಿಂಹನೊಡನೆ ಹೋರಾಡಿ ಗೆದ್ದು ಕನಕಲೇಖೆಯನ್ನು ಬಂಧನದಿಂದ ಬಿಡಿಸಿ ಕರ್ದನನಿಗೊಪ್ಪಿಸುವನು. ಮಂತ್ರಗುಪ್ತ – ಕನಕಲೇಖೆಯರ ವಿವಾಹ, ಮಗಧರಾಜ್ಯದಲ್ಲಿ ಮಂತ್ರಿಪದವಿ ಪಡೆದ ಮಂತ್ರಗುಪ್ತನ ಸಂಗತಿಯೊಂದಿಗೆ ಪ್ರಸಂಗ ಮುಕ್ತಾಯವಾಗುತ್ತದೆ. ಈ ಪ್ರಸಂಗದಲ್ಲಿ ಜಯಸಿಂಹ–ಕರ್ದನರ ಕಾಳಗ ಹಾಗೂ ಜಯಸಿಂಹ – ಮಂತ್ರಗುಪ್ತರ ಕಾಳಗ ದೀರ್ಘವಾಗಿದ್ದು ವೀರರಸದಿಂದ ಕೂಡಿದೆ.

ಸೀತಾಪರಿತ್ಯಾಗ; 15 ಪಾತ್ರಗಳಿಂದ ಕೂಡಿದ ಪ್ರಸಂಗ. ರಾಮಾಯಣದಲ್ಲಿ ಬರುವ ಜನಪ್ರಿಯ ಕಥೆಯೇ ಇದರ ಮೂಲ ರಾವಣನನ್ನು ಜಯಿಸಿ ಬಂದ ರಾಮನು ರಾಜ್ಯವಾಳುತ್ತಿದ್ದ ಸಂದರ್ಭದಲ್ಲಿ ಗರ್ಭಿಣಿ ಸೀತೆಯು ಕಾಡಿಗೆ ಹೋಗಿ ಮುನಿಜನರನ್ನು ಕಾಣುವ ಬಯಕೆಯನ್ನು ತಿಳಿಸುವಳು. ಈ ಘಟನೆಗೆ ಪೋಷಕವಾಗುವಂತೆ ಗೂಢಚಾರ ನೋರ್ವನ ಮೂಲಕ ರಾಮನು 'ಹೊರ ಹೋದ ಕಾಮಿನಿಯ ಸ್ವೀಕರಿಸೆನು, ನಾ ರಾಮನಂತಲ್ಲ' ಎಂಬ ಅಗಸನ ಮಾತನ್ನು ಕೇಳಿ ಸೀತೆಯನ್ನು ಕಾಡಿನಲ್ಲಿ ತೊರೆಯಲು ನಿರ್ಧರಿಸಿದ್ದು, ಇದನ್ನು ಕೇಳಿ ಕೆರಳಿದ ಲಕ್ಷ್ಮಣನ ರೋಷವುಕ್ಕೇರಿದ್ದು, ರಾಮನ ಧರ್ಮ ವಿಚಕ್ಷಣೆಯಂತೆ ಲಕ್ಷ್ಮಣನು ಸೀತೆಯನ್ನು ವನದಲ್ಲಿ ಬಿಟ್ಟು, ಬರಲು ಹೊರಟದ್ದು, ಮಾರ್ಗ ಮಧ್ಯದಲ್ಲಿ ಎದುರಾದ ಸಿಂಹಾಸುರನನ್ನು ಲಕ್ಷ್ಮಣನು ಕೊಂದದ್ದು, ವನಸೌಂದರ್ಯವನ್ನು ವೀಕ್ಷಿಸುತ್ತಿದ್ದ ಸೀತೆಯನ್ನು ಲಕ್ಷ್ಮಣನು ವಾಲ್ಮೀಕಿ ಮುನಿಗಳಾಶ್ರಮದಲ್ಲಿ ಬಿಟ್ಟು ಬಂದದ್ದು, ಸೀತೆಗೆ ಅಲ್ಲಿ ಆಶ್ರಯ ದೊರಕಿ ನವಮಾಸಗಳು ತುಂಬಿದ ಅವಳ ಮಕ್ಕಳಿಗೆ ಜನ್ಮ ಕೊಟ್ಟದ್ದು – ಇವೇ ಮೊದಲಾದ ಕಥಾ

ವಿವರಗಳಿಂದ ಕೂಡಿದೆ ಪ್ರಸಂಗ. ರಜಕ ಮತ್ತು ರಜಕಿಯರ ಸಂಭಾಷಣೆ ಜೀವಂತವಾಗಿದೆ. ಸೀತೆಯನ್ನು ವರ್ಣಿಸುವ ಪದ್ಯ ಶೃಂಗಾರರಸ ಪೂರ್ಣವಾಗಿದೆ. ಪದ್ಯಗಳು ಸರಳವಾಗಿದ್ದು ನೇರವಾಗಿ ಮನಮುಟ್ಟುತ್ತವೆ.

ಕಲ್ಪಸುಂದರಿ ಕಲ್ಯಾಣ: ಇದಕ್ಕೆ ಮತ್ತೊಂದು ಹೆಸರು 'ಉಪಹಾರ ವರ್ಮ ವಿಜಯ' ಹತ್ತು ಪಾತ್ರಗಳಿಂದ ಕೂಡಿದ ಪ್ರಸಂಗ. ಚಾರಿತ್ರಿಕ ವಸ್ತುವಿನಿಂದ ಕೂಡಿದೆ. ಭೂರಮೆಯ ರತ್ನವೆಂಬಂತೆ ಶೋಭಿಸುವ ಮಿಥಿಲಾ ಪುರದರಸ ಪ್ರಹಾರವರ್ಮನ ಮಗ ಉಪಹಾರ ವರ್ಮನ ಪರಾಕ್ರಮದ ಕಥೆಯನ್ನೊಳಗೊಂಡಿದೆ. ವಾಸುದೇವ ಮಹರ್ಷಿಗಳಲ್ಲಿ ಶಿಕ್ಷಣ ಮುಗಿಸಿದ ಉಪಹಾರವರ್ಮ ಸಾಹಸ ಮೆರೆಯಲು ಹೊರಟು, ಮುದ್ಗಲ ಮಹರ್ಷಿಗಳನ್ನು ಸಂದರ್ಶಿಸುವನು. ಅವರ ಸಲಹೆ ಸೂಚನೆಗಳನ್ನು ಪಡೆದು ಕನಕಾರಣ್ಯದಲ್ಲಿ ಸಾಧು ಮುನಿಜನರನ್ನು ಹಿಂಸಿಸುತ್ತಿದ್ದ ಕನಕಾಸುರನೊಂದಿಗೆ ಯುದ್ಧ ಮಾಡಿ ಜಯಿಸುವನು. ತನ್ನ ತಂದೆಯ ಬಂಧನವನ್ನು ತಿಳಿದು ಮಿಥಿಲೆಗೆ ತೆರಳಿ ಕಲ್ಪಸುಂದರಿಯನ್ನು ಹಿಡಿದೊಯ್ಯುತ್ತಿದ್ದ ವಿಶಾಲವರ್ಮನನ್ನು ಸದೆಬಡಿದು ಕಲ್ಪಸುಂದರಿಯನ್ನು ಬಿಡುಗಡೆ ಮಾಡುವನು, ಕಲ್ಪಸುಂದರಿಗೂ ಉಪಹಾರವರ್ಮನಿಗೂ ಅನುರಾಗವುಂಟಾಗುತ್ತದೆ, ಬಳಿಕ ಉಪಹಾರವರ್ಮನು ವಿಕಟವರ್ಮನನ್ನು ಸೋಲಿಸಿ ತಂದೆಯನ್ನು ಬಂಧನದಿಂದ ಬಿಡುಗಡೆ ಮಾಡುವನು, ಕಲ್ಪಸುಂದರಿ – ಉಪಹಾರವರ್ಮರ ಕಲ್ಯಾಣದೊಂದಿಗೆ ಪ್ರಸಂಗ ಅಂತ್ಯಗೊಳ್ಳುತ್ತದೆ. ಸರಳ ಸುಂದರ ಪದ್ಯಗಳಿಂದ ಕೂಡಿದೆ ಈ ಯಕ್ಷಗಾನ ಪ್ರಸಂಗ. ಯುದ್ಧ ವಿವರ ಭಾಗಗಳಲ್ಲಿ ವೀರರಸದ ಸ್ಪರ್ಶವಿದೆ, ಸಂಭಾಷಣೆಗಳಲ್ಲಿ ತೀಕ್ಷ್ಣತೆಯಿದೆ. ಉಪಹಾರವರ್ಮ ಕಲ್ಪ ಸುಂದರಿಯರ ಸಂಭಾಷಣೆ ಮೋಹಕವಾಗಿ ಮೂಡಿಬಂದಿದೆ.

ಮೂಲ ಕಥೆಗೆ ದೃಶ್ಯಗಳನ್ನು ಸೃಷ್ಟಿಸಿ ಸಂಭಾಷಣೆಗಳನ್ನು ರಚಿಸಿರುವ ವಿಷ್ಣುಭಟ್ಟರ ಕಾವ್ಯ ಕಲಾಚಾತುರ್ಯ ತಲೆದೂಗುವಂತಹದು, ಪದ್ಯಗಳಲ್ಲಿ ಪ್ರಾಸವೈಭವವಿದೆ. ಭಾಷೆಯು ಸರಳ ಸುಂದರವಾಗಿದ್ದು ಜನ ಸಾಮಾನ್ಯರಿಗೂ ಅರ್ಥವಾಗುತ್ತದೆ. ನಾದಕ್ಕನುಗುಣವಾಗಿ ಕೆಲವು ಅಪರೂಪದ ಪದ ಪ್ರಯೋಗಗಳನ್ನು ಮಾಡಲಾಗಿದೆ. ಶ್ರೀಯುತರ ಪದ್ಯರಚನಾ ಪ್ರತಿಭೆ ಪ್ರಶಂಸಾರ್ಹ. ಪ್ರಸಂಗಗಳು ಪ್ರದರ್ಶನ ಯೋಗ್ಯವಾಗಿದ್ದು, ಸಾಹಿತ್ಯದ ರಸಲೇಪನದೊಂದಿಗೆ ಕೂಡಿವೆ.

**—ಕೆ. ಎಸ್. ರಾಮಮೂರ್ತಿ**
ಎಂ.ಎ.

———

( 8ನೇ ಪುಟದಿಂದ )

ಜನೆಯ ಫಲವಾಗಿ ಯುಕ್ತಿ–ತರ್ಕಗಳನ್ನು ಉಪಯೋಗಿಸಿ ಸಮಸ್ತ ಜಡೀಯ ಗುಣಗಳಿಗೆ ವಿಪರೀತವಾದ ನಿರ್ವಿಶೇಷಭಾವವನ್ನು ಕಲ್ಪಿಸಿ ಅದನ್ನು ಈಶ್ವರನೆಂದು ತಿಳಿಯುವರು ಇದರಲ್ಲಿ ಪ್ರಕೃತವಾದ ತಥ್ಯವೇನೆಂದರೆ. ಪರಮೇಶ್ವರನು ಜಡ ವಸ್ತುಗಳಿಂದ ಸರ್ವದಾ ವಿಲಕ್ಷಣ ಸ್ವರೂಪನಾಗಿದ್ದರೂ ಆತನು ಎಂದಿಗೂ ಜಡವಿಪರೀತವಾದ ಕಲ್ಪಿತ ತತ್ತ್ವವಾಗಿರಲಾರನು. ಚರಮ ಫಲರೂಪವಾಗಿ ನಿರ್ವಾಣಪ್ರಾಪ್ತಿಯನ್ನು ಲಕ್ಷ್ಯದಲ್ಲಿರಿಸಿ ವಿಷ್ಣು, ಶಿವ, ಪ್ರಕೃತಿ, ಗಣೇಶ ಹಾಗೂ ಸೂರ್ಯ– ಈ ಸಗುಣ ಮೂರ್ತಿಗಳನ್ನು ಸಾಧನೆಯ ಉಪಾಯವನ್ನಾಗಿ ತಿಳಿಯುವವರು ಈಶ್ವರನ ನಿತ್ಯಸ್ವರೂಪವನ್ನು ಸ್ವೀಕರಿಸದೆ ಕಲ್ಪಿತವಾದ ಮೂರ್ತಿಗಳನ್ನು ಪೂಜಿಸಿ ತೃತೀಯ ಶ್ರೇಣಿಯ ಪೌತ್ತಲೀಕತೆಯನ್ನು ಅಭ್ಯಸಿಸುವರು. ಈ ವಿಧವಾದ ಪಂಚೋಪಾಸಕರು ಕಲ್ಪಿತವಾದ ಈಶ್ವರನ ಸಗುಣಮೂರ್ತಿಗಳನ್ನು ಪೂಜಿಸಿ ನಿರ್ಗುಣತ್ವವನ್ನು ಲಾಭಗಳಿಸುವ ಭ್ರಮೆಯಲ್ಲಿ ಕಾಲತಳ್ಳುವರು. ಯೋಗಸಿದ್ಧಿ ಹಾಗೂ ವಿಭೂತಿಗಳನ್ನು ಗಳಿಸುವ ಸಲುವಾಗಿ ಯೋಗಿಗಳು ಕಲ್ಪಿತ ವಿಷ್ಣುಮೂರ್ತಿಯ ಧ್ಯಾನವನ್ನು ಮಾಡುವುದೇ ಚತುರ್ಥಶ್ರೇಣಿಯ ಪೌತ್ತಲೀಕತೆ. ಇದರ ಫಲವಾಗಿ ಇತರ ಫಲಗಳು ಲಾಭವಾದರೂ ಭಗವಂತನ ನಿತ್ಯಸಾಕ್ಷಾತ್ಕಾರ ರೂಪದ ಪರಮಲಾಭವು ಘಟಿಸಲಾರದು. ಜೀವಮಾತ್ರರನ್ನು ಈಶ್ವರನೆಂದು ಪೂಜಿಸುವವರು ಪಂಚಮಶ್ರೇಣಿಯ ಪೌತ್ತಲೀಕರು. ಸರ್ವಕಾಲವೂ ಮಾಯಾವಶಯೋಗ್ಯರಾದ ಜೀವರನ್ನು ಭಗವಂತನೆಂದು ಕರೆಯುವುದು ಘೋರತರದ ಅಪರಾಧವಾಗಿದೆ. ಪೂಜಾರ್ಹರಾದ ಶ್ರೇಷ್ಠ ಜೀವರನ್ನು ಭಗವದ್ಭಕ್ತರೆಂದು ತಿಳಿದು ಪೂಜಿಸಿದಲ್ಲಿ ಈ ವಿಧವಾದ ಅಪರಾಧವು ಘಟಿಸುವುದಿಲ್ಲ. ಸ್ವಯಂ ಭಗವಂತನಾದ ಶ್ರೀಹರಿ ಹಾಗೂ ಶ್ರೀಹರಿಯ ಸಮಸ್ತ ಅವತಾರಗಳು ಮಾತ್ರವೇ ಸಮಸ್ತ ಜಗತ್ತಿನ ಆರಾಧ್ಯ ದೈವವಾಗಿರುವುವು.

ಪೌತ್ತಲೀಕರು ಪರಸ್ಪರ ನಿಂದಕರು

ಉಕ್ತ ಪಂಚವಿಧವಾದ ಪೌತ್ತಲೀಕರು ಭಗವಂತನನ್ನು ನಿಂದಿಸುವರಲ್ಲದೆ ಅವರು ಅಕಾರಣವಾಗಿ ಪರಸ್ಪರರನ್ನೂ ನಿಂದಿಸುವರು. ಪ್ರಥಮ ಶ್ರೇಣಿಯ ಪೌತ್ತಲೀಕರು ಜಡೀಯ ಆಕಾಶದ ವ್ಯಾಪಕಗುಣವನ್ನೇ ಈಶ್ವರನ ಪ್ರಧಾನವಾದ ಗುಣವೆಂದು ತಿಳಿದು ಭಗವಂತನ ಚಿನ್ಮಯ ಸ್ವರೂಪದ ಅವಹೇಳನೆಯನ್ನು ಮಾಡುವರಲ್ಲದೆ ಕಲ್ಪಿತ ಹಾಗೂ ಪರಿಮಿತ ದೇವಾಕಾರಗಳೆಲ್ಲವನ್ನೂ ನಿಂದಿಸುವರು. ಇದರ ತಾತ್ಪರ್ಯವೇನೆಂದರೆ ಸಮಾನ ಅಧಿಕಾರ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕ ಆಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ವನ್ನು ಹೊಂದಿದವರಲ್ಲಿಯೇ ಸಾಪತ್ನ್ಯಭಾವವೂ ತಜ್ಜನಿತ ಕಲಹಗಳೂ ಅನಿವಾರ್ಯವಾಗಿರುತ್ತವೆ. ಭೂತಪೂಜಕರು ಇತರ ಭೂತಪೂಜಕರನ್ನು ನಿಂದಿಸುವರು. ಅರ್ಚಾವಿಗ್ರಹದ ಸ್ವರೂಪವನ್ನು ತಿಳಿದ ಭಗವದ್ಭಕ್ತರು ಯಾವ ಪೌತ್ತಳೀಕರ ಪ್ರತಿಯಾಗಿಯೂ ವಿದ್ವೇಷವನ್ನೂ ಗೈಯರು. ಭಕ್ತರು ಚೆನ್ನಾಗಿ ತಿಳಿದಿರುವರೇನೆಂದರೆ, ಭಗವಂತನ ಸ್ವರೂಪಜ್ಞಾನವನ್ನು ಗಳಿಸದವರು ಕಲ್ಪನೆಯ ಹೊರತಾಗಿ ಇನ್ನೇನನ್ನು ಮಾಡಬಲ್ಲರು? ಈ ರೀತಿಯ ನಿಮ್ನಾಧಿಕಾರಿಗಳು ಯಾವ ಕಾಲಕ್ಕಾದರೂ ಶುದ್ಧಸಾಧುಗಳ ಸಂಗವನ್ನು ಗಳಿಸಿ ಅವರ ಉಪದೇಶಗಳನ್ನು ಶ್ರದ್ಧೆಯಿಂದ ಗ್ರಹಿಸಿದಲ್ಲಿ, ಕಲ್ಪನಾಮೂಲಕವಾದ ಉಪಾಸನೆಗಳನ್ನು ಹೇಯವಾದುದೆಂದು ತಿಳಿದು ನಿರ್ಮಲವಾದ ಬುದ್ಧಿಯನ್ನು ಹೊಂದುವರು.

### ಶ್ರೀ ವಿಗ್ರಹವು ಚಿಂತಾತೀತವಾದುದು

ಶ್ರೀ ಹರಿಯ ಅರ್ಚಾವಿಗ್ರಹವು ಸಾಕ್ಷಾತ್ತಾದ ಭಗವಂತನೆಂಬ ಮಾತನ್ನು ಭಾವುಕತನವೆಂದು ತಿಳಿಯಬೇಕಾಗಿಲ್ಲ. ಇದು ಶಾಶ್ವತವಾದ ಸತ್ಯವಾಗಿದೆ. ಕೇವಲವಾಗಿ ಕುರುಡರಾದವರು ಸೂರ್ಯನನ್ನು ಕಾಣಲಾರದಂತೆಯೇ ನಾಸ್ತಿಕರಾದವರು ಭಗವಂತನನ್ನು ತಿಳಿಯಲಾರರು. ಭಗವಂತನ ಅರ್ಚಾವಿಗ್ರಹದ ಮಹಿಮೆಗಳು ಅನಂತವಾದವು. ಉದಾಹರಣೆಗಾಗಿ, ಒರಿಸ್ಸಾದೇಶದ ಸಾಕ್ಷೀಗೋಪಾಲದೇವರು, ಕ್ಷೀರಚೋರ ಗೋಪೀನಾಥ ದೇವರು, ಉಡುಪಿಯ ಶ್ರೀಕೃಷ್ಣನ ವಿಗ್ರಹ, ಪಂಢರಾಪುರದ ಪಾಂಡುರಂಗ ದೇವರು, ಇತ್ಯಾದಿಯಾಗಿ ಪುಣ್ಯಭೂಮಿಯಾದ ಭಾರತವರ್ಷದಲ್ಲಿ ಅಸಂಖ್ಯವಾದ ಭಗವದ್ವಿಗ್ರಹಗಳು ಕಾಲಕಾಲಕ್ಕೆ ಅದ್ಭುತವೂ, ಚಮತ್ಕಾರಮಯವೂ ಆದ ಲೀಲೆಗಳನ್ನು ಪ್ರಕಾಶಿಸಿರುತ್ತವೆ. ಮಧ್ಯಯುಗದ ಭಕ್ತಶ್ರೇಷ್ಠರಾದ ಜಯದೇವ ಗೋಸ್ವಾಮಿ, ನರಸಿಂಹ ಮೆಹತಾ, ಮೀರಾಬಾಯಿ, ಪುರಂದರದಾಸರು, ತುಕಾರಾಮ ಇತ್ಯಾದಿಗಳ ಜೀವನದಲ್ಲಿ ನಡೆದ ಪವಾಡಕರ ಘಟನೆಗಳು ಸರ್ವಜನವಿದಿತವಾದ ತಥ್ಯಗಳಾಗಿವೆ.

### ಶ್ರೀ ವಿಗ್ರಹವು ಕಾಲಾತೀತವಾದುದು

ಭಗವಂತನ ಸಚ್ಚಿದಾನಂದ ಘನ ನಿತ್ಯವಿಗ್ರಹವು ಪ್ರಾಕೃತ ಬ್ರಹ್ಮಾಂಡಗಳ ಸೃಷ್ಟಿಯ ಪೂರ್ವದಿಂದಲೇ ಅವಸ್ಥಿತವಾಗಿರುವುದನ್ನು ಶಾಸ್ತ್ರೋಕ್ತಿಗಳಿಂದ ನಾವು ತಿಳಿಯಬಹುದು. ಗೀತೆಯಲ್ಲಿ ಭಗವಂತನು ನುಡಿದಿರುವನು, –'ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಂ'– "ಹೇ ಕೌಂತೇಯನೆ, ಪ್ರಾಕೃತ ಜಗತ್ತುಗಳನ್ನು ಸೃಜಿಸುವ ಇಚ್ಛೆಯಿಂದ ನಾನು ನನ್ನ ಮಾಯಾಪ್ರಕೃತಿಯಲ್ಲಿ ನನ್ನ ಕಟಾಕ್ಷದ ಮೂಲಕವಾಗಿ ಅದನ್ನು ಚಾಲಿತಗೊಳಿಸಿದ ಮಾತ್ರದಿಂದಲೇ ಅದರಿಂದಾಗಿ ಸಮಸ್ತ ಚರಾಚರ ವಿಶ್ವಬ್ರಹ್ಮಾಂಡಗಳು ಉದ್ಭವಿಸುತ್ತವೆ." ಭಗವಂತನ ದಿವ್ಯವಾದ ಮನಸ್ಸೂ, ನೇತ್ರಗಳೂ ಇತ್ಯಾದಿಯಾಗಿ ನಿತ್ಯಕಾಲವಾಗಿ ವರ್ತಮಾನವಾಗಿರುವುದನ್ನು ಶಾಸ್ತ್ರಗಳು ಸೂಚಿಸುತ್ತವೆ. "ಯತೋವಾ ಇಮಾನಿ ಭೂತಾನಿ ಜಾಯಂತೇ......" ಮೊದಲಾದ ಶ್ರುತಿವಾಕ್ಯಗಳಿಂದ ಭಗವಂತನ 'ಅಪಾದಾನ', 'ಕರಣ' ಹಾಗೂ 'ಅಧಿಕರಣ' ಕಾರಕಗಳಾದ ಲಕ್ಷಣಗಳು ವ್ಯಕ್ತವಾಗಿ ಆತನ ನಿತ್ಯ ಸವಿಶೇಷ ರೂಪವನ್ನು ತಿಳಿಸುತ್ತವೆ. ಸೃಷ್ಟಿಯ ಆದಿಯಲ್ಲಿ ಭಗವಾನ್ ಶ್ರೀಮನ್ನಾರಾಯಣನು ಬ್ರಹ್ಮನಿಗೆ ಉಪದೇಶಿಸಿದ ಚತುಃಶ್ಲೋಕೀ ಭಾಗವತದಲ್ಲಿಯೂ ಇದನ್ನು ಕಾಣಬಹುದು. ಜಗತ್ತುಗಳ ಸೃಷ್ಟಿಯ ಪೂರ್ವದಲ್ಲಿ ಷಡೈಶ್ವರ್ಯ ಪೂರ್ಣನಾದ ಭಗವಂತನು ಇತರ ಸಮಸ್ತ ತತ್ತ್ವಗಳನ್ನು ತನ್ನಲ್ಲಿಯೇ ಸೇರಿಸಿಕೊಂಡು ಅವಸ್ಥಿತನಾಗಿದ್ದನು. ಸೃಷ್ಟಿಯ ನಂತರವಾಗಿ ಪೂರ್ಣ ವಿಗ್ರಹನಾಗಿರುವ ತಾನೇ ಆ ಸೃಷ್ಟಿಯಲ್ಲಿ ಪ್ರವಿಷ್ಟನಾದನು. ಕೊನೆಯಲ್ಲಿ ಪ್ರಾಕೃತ ಜಗತ್ತು ಭಗವಂತನಲ್ಲಿ ಲಯವಾಗಿ, ಪೂರ್ಣವಾದ ಭಗವಂತನು ಮಾತ್ರವೇ ಉಳಿಯುವನು. ಶ್ರೀ ಹರಿಯು ನಿತ್ಯವೂ ಷಡೈಶ್ವರ್ಯಪೂರ್ಣವೂ ಆದ ವಿಗ್ರಹವನ್ನು ಚೆನ್ನಾಗಿ ನಿರ್ಧರಿಸುವ ಸಲುವಾಗಿ ಚತುಃಶ್ಲೋಕಿಯ ಪ್ರಥಮ ಶ್ಲೋಕದಲ್ಲಿ (ಭಾಗವತ ೨-೯-೩೨) 'ಅಹಂ' ಶಬ್ದವು ಮೂರು ಬಾರಿಯಾಗಿ ಪ್ರಯುಕ್ತವಾಗಿದೆ. ಪ್ರಾಕೃತ ಸೃಷ್ಟಿಯ ಪೂರ್ವದಿಂದಲೂ ಭಗವಂತನ ತ್ರಿಗುಣಾತೀತವಾದ ಇಂದ್ರಿಯ, ಮನಸ್ಸು, ವಿಗ್ರಹ ಹಾಗೂ ಸೃಷ್ಟಿಕಾರ್ಯದ ಸಲುವಾಗಿ ಇಚ್ಛೆಗಳು ಸೂಚಿತವಾಗಿರುವುದರಿಂದ ಭಗವಂತನ ನಿತ್ಯವಾದ ಸವಿಶೇಷ ವಿಗ್ರಹವು ಅನಾದಿಕಾಲದಿಂದಲೂ ಸ್ವೀಕೃತವಾಗಿದೆ.

### ಭಗವಂತನು ವಿಶುದ್ಧವಾದ ಪ್ರೇಮದ ಅಧೀನ

ಶ್ರೀಕೃಷ್ಣನ ದಿವ್ಯವಾದ ನಾಮಗಳೂ, ಆ ನಾಮಗಳಿಂದ ಸೂಚಿತವಾದ ಚಿನ್ಮಯ ವಿಗ್ರಹಗಳೂ ಪರಸ್ಪರವಾಗಿ ಅಭಿನ್ನವಾಗಿವೆ. ಶಬ್ದಬ್ರಹ್ಮವಾದ ಪ್ರಣವದ ಆಶ್ರಯವಾದ (ಬ್ರಹ್ಮಣೋಹಿ ಪ್ರತಿಷ್ಠಾಹಮ್) ಶ್ರೀಕೃಷ್ಣನ ನಾಮಗಳನ್ನು ಸತ್ಸಂಗದ ಮೂಲಕವಾಗಿ ನಿರಪರಾಧದಿಂದ ನಿತ್ಯಕಾಲವೂ ಶ್ರವಣ, ಕೀರ್ತನ, ಸ್ಮರಣೆ ಇತ್ಯಾದಿಗಳಿಂದ ನಿಷ್ಕಪಟವಾಗಿ ಸೇವಿಸಿದಲ್ಲಿ ಭಗವದನುಗ್ರಹದಿಂದ ಸಾಧಕರ ಚಿನ್ಮಯ ಹೃದಯಗಳಲ್ಲಿ ಶ್ರೀಕೃಷ್ಣನ ಚಿನ್ಮಯ ವಿಗ್ರಹವು ಉದಯಿಸುವುದು.

ಪದ್ಮಪುರಾಣದ ವಚನದಂತೆ,–

ನಾಮ ಚಿಂತಾಮಣಿಃ ಕೃಷ್ಣಶ್ಚೈತನ್ಯರಸ
ವಿಗ್ರಹಃ ।
ಪೂರ್ಣಃ ಶುದ್ಧೋ ನಿತ್ಯಮುಕ್ತೋಽಭಿನ್ನ
ತ್ವಾನ್ನಾಮ ನಾಮಿನೋಃ ॥

ಶ್ರೀಹರಿಯ ಚಿದ್ವಿಗ್ರಹವನ್ನು ಶ್ರದ್ಧೆಯಿಂದ ಸೇವಿಸಿದಲ್ಲಿ ಆತನ ದಿವ್ಯನಾಮಗಳಲ್ಲಿ ಆಸಕ್ತಿಯು ಜನಿಸುವುದು, ಅನಂತರವಾಗಿ ದಿವ್ಯವಾದ ಭಗವನ್ನಾಮಗಳನ್ನು ನಿರಂತರವಾಗಿ ಪ್ರೀತಿಯಿಂದ ಉಚ್ಚರಿಸುತ್ತಿದ್ದಲ್ಲಿ ಚಿನ್ಮಯರೂಪವಾದ ಸಚ್ಚಿದಾನಂದ ವಿಗ್ರಹವು ಹೃದಯದಲ್ಲಿ ಆವಿರ್ಭವಿಸುವುದು. ಸೃಷ್ಟಿಯ ಆದಿಕಾಲದಿಂದಲೂ ವಿಭಿನ್ನರಾದ ಭಕ್ತರು ಈ ವಿಧವಾಗಿ ಭಗವದ್ದರ್ಶನಗೈದುದನ್ನು ಸನಾತನ ಶಾಸ್ತ್ರಗಳಾದ ವೇದ, ಉಪನಿಷತ್ತು, ಪುರಾಣ, ಪಂಚರಾತ್ರ ಆಗಮ ಇತ್ಯಾದಿಗಳಿಂದ ತಿಳಿಯಬಹುದಾಗಿದೆ. ನಿಷ್ಕಪಟರಾದ ಸಾಧಕರು ಭಗವಂತನ ಉತ್ತಮಭಕ್ತರಾದ ಸಾಧುಪುರುಷರ ಸಂಗಗಳಲ್ಲಿ ಕಾಲಕಳೆದು ಅವರ ಉಪದೇಶಗಳನ್ನು ಪಾಲಿಸುತ್ತ ಶುದ್ಧಭಕ್ತಿಯ ಮೂಲಕವಾಗಿ ಭಗವಂತನ ಅರ್ಚಾಮೂರ್ತಿಯನ್ನು ಸಾಕ್ಷಾತ್ತಾಗಿ ಭಗವಂತನೆಂದು ತಿಳಿದು ಶಾಸ್ತ್ರೋಕ್ತವಾಗಿ ಆರಾಧಿಸಿದಲ್ಲಿ ನಿಶ್ಚಯವಾಗಿಯೂ ಪಾರಮಾರ್ಥಿಕ ಶ್ರೇಯಸ್ಸನ್ನು ಗಳಿಸಬಹುದಾಗಿದೆ. ★

## ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

# ರಂಗಾರೆಡ್ಡಿ ಜಿಲ್ಲೆಯಲ್ಲಿ ತಿ.ತಿ.ದೇ. ಕಲ್ಯಾಣ ಮಂಟಪ

ರಂಗಾರೆಡ್ಡಿ ಜಿಲ್ಲೆಯ ಕೇಸರಗುಟ್ಟದಲ್ಲಿ ತಿ. ತಿ. ದೇ ಕಲ್ಯಾಣ ಮಂಟಪ ನಿರ್ಮಾಣಕ್ಕಾಗಿ ಈಚೆಗೆ ಶಂಕುಸ್ಥಾಪನೆ ನಡೆಯಿತು. 9 ಲಕ್ಷ ರೂ॥ಗಳ ಅಂದಾಜು ವೆಚ್ಚದ ಈ ಕಲ್ಯಾಣ ಮಂಟಪಕ್ಕೆ ಶಂಕುಸ್ಥಾಪನೆ ತಿ ತಿ. ದೇ ಆಡಳಿತ ನಿರ್ವಾಹಕ ಮಂಡಳಿಯ ಸದಸ್ಯ ಶ್ರೀ ಕೆ. ವೀರಾರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ಆಂಧ್ರ ಪ್ರದೇಶದ ದೇವಾದಾಯ ಇಲಾಖಾ ಕಮೀಷನರ್ ಶ್ರೀ ಪಿ. ಯಸ್. ರಾಜಗೋಪಾಲರಾಜು ಅವರಿಂದ ನಡೆಯಿತು ಇದೇ ಸಮಾರಂಭದಲ್ಲಿ ತಿ. ತಿ· ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿಯವರು 3,15,000 ರೂ॥ಗಳ ಅಂದಾಜುವೆಚ್ಚದ ವೇದ ಪಾಠಶಾಲಾ ಭವನ ನಿರ್ಮಾಣಕ್ಕೆ ಶಂಕುಸ್ಥಾಪನೆ ಮಾಡಿದರು. ಆಂಧ್ರಪ್ರದೇಶದ ಸಹಕಾರೀ ಬ್ಯಾಂಕಿನ ಮ್ಯಾನೇಜಿಂಗ್ ಡೈರೆಕ್ಟರ್ ಆಗಿರುವ ಶ್ರೀ ಪಿ ವಿ ಆರ್ ಕೆ. ಪ್ರಸಾದರು 2 ಲಕ್ಷ ರೂ॥ಗಳ ಅಂದಾಜು ವೆಚ್ಚದ ಪ್ರಾರ್ಥನಾ ಮಂದಿರಕ್ಕೆ ಶಂಕುಸ್ಥಾಪನೆ ಮಾಡಿದರು. ರಂಗಾರೆಡ್ಡಿ ಜಿಲ್ಲೆಯ ಕಲೆಕ್ಟರ್ ಶ್ರೀ ಡಿ. ಮುರಳೀಕೃಷ್ಣ ಅವರು 2,20,000 ರೂ॥ಗಳ ವೆಚ್ಚದ ಉದ್ಯೋಗಿಗಳ ಗೃಹಗಳಿಗೆ ಶಂಕುಸ್ಥಾಪನೆ ಮಾಡಿದರು. ತಿ ತಿ. ದೇ ಪೌರ ಸಂಬಂಧ ಶಾಖಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿ ಅವರು ಸಭೆಯನ್ನು ವಂದಿಸಿದರು

* * * *

# ದೇವಾಲಯಗಳಿಗೆ ತಿ. ತಿ. ದೇ. ಶ್ವೇತ ಛತ್ರ

ವಿವಿಧ ದೇವಾಲಯ, ಹಾಗೂ ಧಾರ್ಮಿಕ ಸಂಸ್ಥೆಗಳಿಗೆ ಧಾರ್ಮಿಕ ಉತ್ಸವಗಳಲ್ಲಿ ಬಳಸಲು ಶ್ವೇತ ಛತ್ರಗಳನ್ನು ಐವತ್ತು ಶತಾಂಶ ರಿಯಾಯಿತಿ ದರದಲ್ಲಿ ಒದಗಿಸಲು ತಿ ತಿ ದೇ ತೀರ್ಮಾನಿಸಿದೆ. ಇದರಂತೆ ಆಂಧ್ರ ಪ್ರದೇಶದ ಮುಜರಾಯಿ ಇಲಾಖಾ ಕಾಯದೆಯನ್ವಯ ನೋಂದಣಿ ಹೊಂದಿದ ದೇವಾಲಯಗಳಿಗೆ, ಹಾಗೂ ಧಾರ್ಮಿಕ ಸಂಸ್ಥೆಗಳಿಗೆ ತಲಾ ಎರಡು ಶ್ವೇತ ಛತ್ರಗಳನ್ನು ರೂ॥ 600– ಶುಲ್ಕದಿಂದ ನೀಡಲಾಗುವುದು. ಸದರಿ ಹಣವನ್ನು ತಿ. ತಿ ದೇ ಕಾರ್ಯನಿರ್ವಹಣಾಧಿಕಾರಿಯವರಿಗೆ ಆಯಾ ಪ್ರದೇಶದ ಮುಜರಾಯಿ ಇಲಾಖಾ ಅಸಿಸ್ಟೆಂಟ್ ಕಮೀಷನರ್ ಅವರ ಮೂಲಕ ಕಳುಹಿಸಬೇಕೆಂದು ವರದಿಯೊಂದು ತಿಳಿಸಿದೆ.

* * * *

# ವಾರ್ತಾಲಹರಿ

## ಪ್ರಬಂಧ ಸ್ಪರ್ಧಾ ಫಲಿತಾಂಶಗಳು

ಈಶ್ವರೀಯ ಬ್ರಹ್ಮ ಕುಮಾರಿಯರ ವಿಶ್ವ ವಿದ್ಯಾನಿಲಯವು ತಿ. ತಿ. ದೇ ಸಹಕಾರದೊಂದಿಗೆ ಈಚೆಗೆ ನಡೆಸಿದ "ಪ್ರಾಚೀನ ಭಾರತದ ವೈಭವ"– ವಿಷಯದ ಆಂಗ್ಲ, ಸಂಸ್ಕೃತ, ಹಿಂದಿ ಪ್ರಬಂಧ ಸ್ಪರ್ಧೆಗಳಲ್ಲಿ ಹತ್ತು ಮಂದಿ ವಿಜೇತರಾಗಿದ್ದಾರೆಂದು ಪ್ರಕಟಿಸಲಾಗಿದೆ. ಅವರುಗಳೆಂದರೆ ಸರ್ವಶ್ರೀ

ಆನಂದ ನಂದ ಕಿಶೋರ ( ಜಲಂಧರ್ )
ಡಾ॥ ಚಕ್ರವರ್ತಿ ( ಹೊಸ ದೆಹಲಿ )
ಕೃಷ್ಣಸ್ವಾಮಿ ( ಸಿಕಂದರಾಬಾದ್ )
ಲಾಗವಾಲಿ ದೇವದತ್ತ ( ಭಾವನಗರ್ )
ವಸಂತ ಸದಾಶಿವ ( ಕೈಸಾಡ್ )
ಪಟ್ನಾಯಕ್ ಚಂದ್ರಭಾನು (ಭುವನೇಶ್ವರ್)
ರಾಧಾಕೃಷ್ಣನ್ ( ಅನಂತಪುರ )
ರಾವತ್ ವಿಷ್ಣು ರಾಮಚಂದ್ರ ( ಕಿಕೋಲ )
ವಿನಾಯಕ ಸುರೇಂದ್ರ ಕುಮಾರ್ ( ಹೊಸದೆಹಲಿ )
ಸಿ ವೆಂಕಟೇಶ್ವರುಲು ( ಸತ್ಯನಾರಾಯಣಪುರ )

ಈ ವೇಳಿನ ಹತ್ತು ಮಂದಿ ವಿಜೇತರಿಗೆ ಸಧ್ಯದಲ್ಲೇ ತಿರುಪತಿಯಲ್ಲಿ ನಡೆಯಲಿರುವ ಬಹುಮಾನ ವಿನಿಯೋಗ ಸಮಾರಂಭದಲ್ಲಿ 19,750 ರೂ॥ಗಳ ನಗದು ಬಹುಮಾನಗಳನ್ನು ಹಂಚಲಾಗುವುದು

* * * *

## ವರುಣ ಜಪ

ತಿರುಮಲೆಯ ಶ್ರೀ ವರಾಹಸ್ವಾಮಿ ಆಲಯದಲ್ಲಿ ಮಹಾ ಸಂಪ್ರೋಕ್ಷಣೆ ಈಚೆಗೆ ನಡೆಯಿತು. ಒಂದು ವಾರದಕಾಲ ವಿವಿಧ ಭಾಗಗಳಿಂದ ಆಗಮಿಸಿದ ಪಂಡಿತರಿಂದ ನಡೆದ ವರುಣ ಜಪದಲ್ಲಿ ಯಜ್ಞ ಕರ್ತರಾಗಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿ ದಂಪತಿಗಳು ಭಾಗವಹಿಸಿದ್ದರು. ಶ್ರೀ ರಾಮಾನುಜ ಭಟ್ಟರೇ ಆದಿಯಾದ ಋತ್ವಿಕರಿಂದ ಕೂಡಿದ ಪಂಡಿತಗೋಷ್ಠಿ ಸ್ವಾಮಿ ಪುಷ್ಕರಿಣಿಯಲ್ಲಿ ನೀರಿನಲ್ಲಿ ನಿಂತು ಮಂತ್ರ ಜಪವನ್ನು ನಡೆಸಿಕೊಟ್ಟರು. ಪೇಷ್ಕಾರ್ ಶ್ರೀ ಕೃಷ್ಣಸ್ವಾಮಿಯವರ ಮುಂದಾಳತ್ವದಲ್ಲಿ ನಡೆದ ವರುಣ ಜಪ ಜುಲೈ ಮೂವತ್ತರಂದು ಮುಕ್ತಾಯವಾಯಿತು



ವರುಣ ಜಪದ ಯಜ್ಞಕರ್ತರಾದ ಶ್ರೀ ಜಿ ಕುಮಾರಸ್ವಾಮಿರೆಡ್ಡಿ ಹಾಗೂ ಋತ್ವಿಕ ಪಂಡಿತರು.

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | ಪ್ರಾ 7-30 | ಪ್ರಾ 8-00 |
| ಅರ್ಚನ (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | ಪ್ರಾ 8-00 | ಪ್ರಾ 8-30 |
| ಸರ್ವದರ್ಶ | ಪ್ರಾ 9-00 | ಮ 12-30 |
| | ಮ 1-00 | ಸಂ 6-00 |
| | ರಾ 7-00 | ರಾ 8-45 |
| | ರಾ 9-00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ರ ವರೆಗೆ ಮಾತ್ರ.

## ಅರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32-00 |
| 2. | ಚಂದ್ರಪ್ರಭ ವಾಹನ | 32-00 |
| 3. | ಗಜವಾಹನ | 32-00 |
| 4. | ಅಶ್ವವಾಹನ | 32-00 |
| 5. | ಸಿಂಹವಾಹನ | 32-00 |
| 6. | ಹಂಸವಾಹನ | 32-00 |
| 7. | ಚಿಕ್ಕಶೇಷವಾಹನ | 32-00 |
| 8. | ದೊಡ್ಡ ಶೇಷವಾಹನ | 62-00 |
| 9. | ಸೂರ್ಯಪ್ರಭವಾಹನ | 62-00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35-00 |
| 2. | ದಧ್ಯೋದನ | „ | 40-00 |
| 3. | ಪುಳಿಯೋಗರೆ | „ | 50-00 |
| 4. | ಪೊಂಗಲು | „ | 55-00 |
| 5. | ಸಕ್ಕರೆಪೊಂಗಲ್ | „ | 65-00 |
| 6. | ಶಾಕರ ಭಾತ್ | „ | 85-00 |
| 7. | ಕೇಸರೀ ಭಾತ್ | „ | 90-00 |
| 8. | ಸೀರ | „ | 155-00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

# 'ಸರ್ವ ಪ್ರಯತ್ನಗಳಿಂದ ಧರ್ಮ ಪ್ರಸಾರ ನಡೆಯುತ್ತಿದೆ'

– ಶ್ರೀ ಜಿ ಕುಮಾರಸ್ವಾಮಿ.ರೆಡ್ಡಿ.

ತಿ ತಿ ದೇವಸ್ಥಾನಗಳು ಹಿಂದೂ ಧರ್ಮ ಪ್ರಸಾರ ಕಾರ್ಯದಲ್ಲಿ ಕಂಕಣಬದ್ಧವಾಗಿದೆ. ಹಾಗಾಗಿ ಸರ್ವ ಪ್ರಯತ್ನದಿಂದ ಧರ್ಮ ಪ್ರಸಾರ ಕಾರ್ಯ ನಡೆಯುತ್ತಿದೆ ಎಂದು ಹೇಳುತ್ತ, ತಿ. ತಿ ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ ಕುಮಾರಸ್ವಾಮಿ ರೆಡ್ಡಿಯವರು ಸಮಾಜ ಆಸಕ್ತಿಯಿಂದ ತಿ ತಿ. ದೇ ಯೋಜನೆಗಳನ್ನು ಸ್ವಾಗತಿಸುತ್ತಿದೆ ಎಂದು ಹರ್ಷ ಧ್ವನಿಯ ಮಧ್ಯೆ ತಿಳಿಸಿದರು

ಶ್ರೀಯುತರು ಹೈದರಾಬಾದಿನಲ್ಲಿ ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಉಪನ್ಯಾಸ – ಪ್ರಸಾರ ಶಿಬಿರವನ್ನು ಉದ್ಘಾಟಿಸುತ್ತ 26-7-82 ರಂದು ಆಂಧ್ರ ಪ್ರದೇಶದ ಮುಜರಾಯಿ ಇಲಾಖಾ ಕಚೇರಿಯಲ್ಲಿ ಮಾತನಾಡುತ್ತಿದ್ದರು

ಅಧ್ಯಕ್ಷತೆ ವಹಿಸಿದ ಇಲಾಖಾ ಕಮೀಷನರ್ ಶ್ರೀ ಪಿ ಯಸ್. ರಾಜಗೋಪಾಲರಾಜು ಅವರು ಮಾತನಾಡುತ್ತ ಹಿಂದೂ ಧರ್ಮ ಪ್ರಸಾರದಲ್ಲಿ ತಿ ತಿ ದೇವಸ್ಥಾನಗಳ ಪಾತ್ರ ಸಮಕಾಲೀನ ಸಮಾಜದಲ್ಲಿ ಮಹತ್ವದ್ದು ಎಂದು ನುಡಿಯುತ್ತ ಸಮಾಜದಲ್ಲಿ ಧರ್ಮದ ಬಗೆಗಿನ ಮೂಲಭೂತ ಅಸಡ್ಡೆಯ ಧೋರಣೆಯ ಬದಲಾವಣೆ ತುರ್ತಾಗಿ ಆಗಬೇಕಾಗಿದೆ ಎಂದು ವಿವರಿಸಿ ಆ ದಿಕ್ಕಿನಲ್ಲಿ ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕೆಲಸ ಇನ್ನೂ ಗಮನಾರ್ಹವಾಗಿ ಹೆಚ್ಚಾಗಬೇಕಿದೆ ಎಂದರು.

ತಿ. ತಿ. ದೇ. ಆಡಳಿತ ನಿರ್ವಾಹಕ ಮಂಡಳಿಯ ಸದಸ್ಯ ಶ್ರೀ ಕೆ ವೀರಾರೆಡ್ಡಿಯವರು ಹಿಂದೂ ಧರ್ಮ ರಕ್ಷಣ ಸಂಸ್ಥೆ ಬೆಳೆದು ಬಂದ ದಾರಿಯನ್ನು ಪರಿಶೀಲಿಸಿದರು. ಶ್ರೀ ಪಿ. ವಿ. ಆರ್. ಕೆ. ಪ್ರಸಾದ್ ಅವರು ಪುರಾಣ ಪರಿಚಯ ಪರೀಕ್ಷೆಗಳಲ್ಲಿ ವಿಜೇತರಿಗೆ ಬಹುಮಾನಗಳನ್ನು ವಿತರಣೆ ಮಾಡಿದರು

ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರು ವರದಿಯನ್ನು ಓದಿದರು. ಸಭೆಯು ಶ್ರೀ ವೆಂಕಟೇಶ್ವರ ವೈಭವಂ ಚಲನ ಚಿತ್ರ ಪ್ರದರ್ಶನದಿಂದ ಮುಕ್ತಾಯವಾಯಿತು.

* * * *

( 21 ನೇ ಪುಟದಿಂದ )

ಸ್ತುತಿಮಾಡಿ ಸಂತೋಷಗೊಳಿಸಲು ಪ್ರಿಯವಾದ ಅಸತ್ಯ ನುಡಿಯುವುದು ಒಳ್ಳೆಯದಲ್ಲ. ಒಬ್ಬರಲ್ಲಿ ದೋಷವಿರುವುದನ್ನು ಗುರುತಿಸಿದರೂ ಅದನ್ನು ಅವರಿಗೆ ಹೇಳಿದರೆ ಅವರೆಲ್ಲಿ ತಪ್ಪು ತಿಳಿದುಕೊಳ್ಳುವರೋ ಎಂದು ಸುಮ್ಮನಿರುವವರೇ ಹೆಚ್ಚು ಹೀಗಾಗಿ ತಪ್ಪನ್ನೇ ಒಪ್ಪು ಎಂದು ತಿಳಿದು, ಅದೇ ದಾರಿಯಲ್ಲಿ ಮುಂದುವರಿದು ತಿದ್ದಲಾಗದಂತಹ ಸ್ಥಿತಿ ತಲಪುತ್ತಾರೆ. 'ಬೈದು ಹೇಳಿದವ ಬಾಳೋಕೆ ಹೇಳಿದ' ಎಂಬ ಗಾದೆಮಾತಿದೆ. ಕರಾರುವಾಕ್ಕಾದ ನುಡಿ ಕಹಿಯಾದ ಔಷಧದಂತೆ ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿಯಾಗಿ ಶುಭಪ್ರದವಾಗಿರುತ್ತದೆ ದುಃಖದಲ್ಲಿರುವವರಿಗೆ ಒಂದೆರಡು ಸಾಂತ್ವನದ ನುಡಿಯಾಡುವುದರಿಂದ ಬೆಂದ ಹೃದಯಕ್ಕೆ ತಂಪನ್ನೆರೆದಂತಾಗುತ್ತದೆ. ಒಂದೆರಡು ಉತ್ತೇಜನದ ನುಡಿಗಳು ನಿರಾಶೆಯ ಕೂಪದಲ್ಲಿ ಮುಳುಗಿದ್ದವನಲ್ಲಿ ಹೊಸ ಆಸೆ ಚಿಗುರಿಸಿ ಕಾರ್ಯ ಪ್ರವೃತ್ತನಾಗುವಂತೆ ಮಾಡುತ್ತವೆ. ಕೆಟ್ಟ ಹಾದಿಯಲ್ಲಿದ್ದವನನ್ನು ಪಶ್ಚಾತ್ತಾಪಪಟ್ಟು ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸುತ್ತದೆ. ಆದ್ದರಿಂದ 'ಮಾತೆಂಬುದು ಜ್ಯೋತಿರ್ಲಿಂಗ' ಎನ್ನುತ್ತಾರೆ ಬಸವಣ್ಣನವರು. ನಾವು ಆಡುವ ಮಾತು ಶಿವನೂ ಮೆಚ್ಚಿ ತಲೆದೂಗುವಂತಿರಬೇಕೆನ್ನುವ ಅಣ್ಣನವರು 'ನುಡಿದರೆ ಮುತ್ತಿನ ಹಾರದಂತಿರಬೇಕು' ಎನ್ನುತ್ತಾರೆ. ಮಾತನ್ನು ಮುತ್ತಿಗೆ ಹೋಲಿಸಿರುವುದು ಔಚಿತ್ಯಪೂರ್ಣವಾಗಿದೆ. ಮುತ್ತು ನೋಡಲು ಆಕರ್ಷಕವಾಗಿರುತ್ತದೆ; ಆದರೆ, ಕೈಜಾರಿ ಕೆಳಗೆಬಿದ್ದರೆ ಒಡೆದು ವಿರೂಪಗೊಳ್ಳುತ್ತದೆ. ಒಡೆದ ಮುತ್ತನ್ನು ಮತ್ತೆ ಒಂದುಗೂಡಿಸಲಾಗುವುದಿಲ್ಲ. ಹಾಗೆಯೇ ಸವಿನುಡಿಯ ಸರಮಾಲೆ ಮನಸ್ಸಿಗೆ ಮುದ ನೀಡುತ್ತದೆ. ಆದರೆ, ಕೆಟ್ಟಮಾತು ಕೂರಲಗಿನಂತೆ ಮನಸ್ಸಿಗೆ ನಾಟುತ್ತದೆ ಒಡೆದ ಮುತ್ತಿನಂತೆ, ಜಾರಿದ ಮಾತನ್ನೂ ಹಿಂದೆ ಪಡೆಯಲಾಗುವುದಿಲ್ಲ. ದೇಹಕ್ಕೆ ಬಿದ್ದ ಪೆಟ್ಟು ಕೆಲವಾರು ದಿನಗಳಲ್ಲಿ ಮಾಗುತ್ತದೆ ಆದರೆ ಮಾತಿನ ಮೊನೆಯಿಂದ ಹೃದಯಕ್ಕೆ ಬಿದ್ದ ಪೆಟ್ಟು ಎಂದಿಗೂ ಮಾಯದೆ ಹೃದಯವನ್ನು ಸದಾ ಇರಿಯುತ್ತಿರುತ್ತದೆ– 'ಮಾತೇ ಮುತ್ತು, ಮಾತೇ ಮೃತ್ಯು' ಎಂಬ ನುಡಿ, ಮಾನವನ ವ್ಯಕ್ತಿತ್ವವನ್ನು ದೈವತ್ವಕ್ಕೇರಿಸುವುದೂ ಮಾತೇ, ದಾನವತ್ವಕ್ಕೆ ತಳ್ಳುವುದೂ ಮಾತೇ ಎಂಬುದನ್ನು ಸ್ಪಷ್ಟಪಡಿಸುತ್ತದೆ.

"ಮಾತಿನಿಂ ನಗೆ ನುಡಿಯು ಮಾತಿನಿಂ
ಹಗೆಹಿತಿಯು
ಮಾತಿನಿಂ ಸರ್ವಸಂಪದವು ಲೋಕಕ್ಕೆ
ಮಾತೆ ಮಾಣಿಕವು ಸರ್ವಜ್ಞ ।"

# ಗೌರವ ಸಂಪಾದಕರಿಗೆ

## ಬೀಳ್ಕೊಡುಗೆ

ಸಪ್ತಗಿರಿಯ ಸರ್ವತೋಮುಖ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸಿ, ಸಂಪಾದಕ ವರ್ಗ, ಮುದ್ರಣ ವರ್ಗಗಳಿಗೆ ಚಿರಂತನ ಸ್ಫೂರ್ತಿಯ ಸೆಲೆಯಾಗಿ ಮೂರು ವರ್ಷಗಳ ಕಾಲ ಅದರ ಗೌರವ ಸಂಪಾದಕರಾಗಿ ಸಲಹೆ, ಸಹಾಯ, ಸಹಾನುಭೂತಿಗಳನ್ನು ನಿರಂತರವಾಗಿ ಸೂಚಿಸಿದ ಸಾಹಿತ್ಯಪ್ರಿಯ ಶ್ರೀ ಪಿ. ವಿ. ಆರ್ ಕೆ. ಪ್ರಸಾದ್ ಅವರು ಉದ್ಯೋಗ ರೀತ್ಯಾ ವರ್ಗಾವಣೆ ಹೊಂದಿದ ಸಂದರ್ಭದಲ್ಲಿ ಸಪ್ತಗಿರಿ ಭಾರವಾದ ಹೃದಯದಿಂದ ಅವರನ್ನು ಸರಳ ಸಮಾರಂಭದಲ್ಲಿ ಬೀಳ್ಕೊಟ್ಟಿತು

ದಿನಾಂಕ 15–7–82 ಸಪ್ತಗಿರಿಯಲ್ಲಿ ನಡೆದ ಬೀಳ್ಕೊಡುಗೆ ಸಭೆಯನ್ನು ವಿದ್ವಾನ್ ವಿಶ್ವಂ ಅವರ ಅಧ್ಯಕ್ಷತೆಯಲ್ಲಿ ಸ್ವಾಗತಿಸುತ್ತ ಶ್ರೀ ರಾವುಲ ಸೂರ್ಯನಾರಾಯಣಮೂರ್ತಿ ಅವರು ಮೂರು ವರ್ಷದ ಅವಧಿಯಲ್ಲಿ ಶ್ರೀಪ್ರಸಾದರು ಕೈಗೊಂಡ ಅನೇಕ ಯೋಜನೆಗಳನ್ನು ವಿವರಿಸಿದರು.

ಸಪ್ತಗಿರಿಯ ಬೆಳವಣಿಗೆಯ ಇತಿಹಾಸವನ್ನು ಗುರುತಿಸುತ್ತ ಸಂಪಾದಕ ಕಾಟ್ರಪಾಟಿ ಸುಬ್ಬರಾವ್ ಅವರು ಸಪ್ತಗಿರಿಯ ಇಂದಿನ ರೂಪಕ್ಕೆ ಕಾರಣರಾದ ಶ್ರೀ ಸಿ. ಅನ್ನಾರಾವ್, ಶ್ರೀ ಯಂ. ಚಂದ್ರಮೌಳಿರೆಡ್ಡಿ, ಶ್ರೀ ಪಿ. ಎಸ್. ರಾಜಗೋಪಾಲರಾಜು ಅವರುಗಳನ್ನು ಸ್ಮರಿಸುತ್ತ ಶ್ರೀ ಪಿ. ವಿ ಆರ್. ಕೆ. ಪ್ರಸಾದರ ಕಾಲದಲ್ಲಿ ಆದ ಸರ್ವತೋಮುಖ ಅಭಿವೃದ್ಧಿಯಲ್ಲಿ ಅವರ ಕುಂದಿಲ್ಲದ ಆಸಕ್ತಿಯನ್ನು ನೆನೆದು ಕೃತಜ್ಞತೆಯನ್ನು ಅರ್ಪಿಸಿದರು.

ಸಪ್ತಗಿರಿ ಉದ್ಯೋಗಿಗಳ ಪರವಾಗಿ ಬೀಳ್ಕೊಡುಗೆಯ ಸುಮಹಾರಗಳನ್ನು ಸರ್ವಶ್ರೀ ಅನ್ನಾಜಿರಾವ್ ಪಂತುಲು, ಪಾಯಸಂ ಸುಬ್ರಹ್ಮಣ್ಯಂ, ಸುಧಾಕರರೆಡ್ಡಿ (ತೆಲುಗು ಉಪಸಂಪಾದಕ) ಎನ್. ಎಸ್. ರಾಮಮೂರ್ತಿ (ತಮಿಳು ಉಪಸಂಪಾದಕ) ಅವರುಗಳು ಅರ್ಪಿಸಿದರು. ತಿ. ತಿ. ದೇ. ಪ್ರಕಟನೆಗಳ ಕೋ ಆರ್ಡಿನೇಟರ್ ಶ್ರೀ ಎಸ್. ಬಿ. ರಘುನಾಥಾಚಾರ್ಯ ಅವರು ಸಂಸ್ಕೃತದಲ್ಲಿ ಮಾತನಾಡುತ್ತ ಶ್ರೀ ಪಿ. ವಿ. ಆರ್. ಕೆ. ಪ್ರಸಾದರು ಸಾಹಿತ್ಯಪ್ರಿಯರಾಗಿ, ಸಾಹಿತ್ಯಾಶ್ರಯರಾಗಿ ಧಾರ್ಮಿಕ ಸಾಹಿತ್ಯ ಪ್ರಸಾರದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಬಗೆಯನ್ನು ವಿವರಿಸಿದರು ಸರ್ವಶ್ರೀ ಗೌರಿಪೆದ್ದಿ ರಾಮಸುಬ್ಬಶರ್ಮ, ಡಾ॥ ನಂಡೂರಿ ರಾಮಕೃಷ್ಣಮಾಚಾರ್ಯ ಡಾ॥ ರಾಧಾಕೃಷ್ಣಶರ್ಮ ಅವರುಗಳು ಶ್ರೀಪ್ರಸಾದರ ಆಸಕ್ತಿ ವೈವಿಧ್ಯ, ಆಳಗಳನು, ಕುರಿತು ಮಾತನಾಡಿದರು.

ಬೀಳ್ಕೊಡುಗೆಯ ಸನ್ಮಾನಕ್ಕೆ ಉತ್ತರಿಸುತ್ತ ಶ್ರೀ ಪ್ರಸಾದರು ತಾವು ಸಪ್ತಗಿರಿ ಮಾಸ ಪತ್ರಿಕೆಯನ್ನು ಹಿಂದೂ ಧರ್ಮದ ಮುಖವಾಣಿಯನ್ನಾಗಿ ಮಾಡಬೇಕೆಂದು ಪ್ರಯತ್ನಿಸಿದುದಾಗಿಯೂ, ಹಾಗೆ ಮಾಡಿದ್ದರಿಂದ ಹೆಚ್ಚು ತೃಪ್ತಿಕರ ಫಲಿತಾಂಶಗಳು ದೊರೆತಿವೆ ಎಂದು ತಿಳಿಸಿ, ತಾವು ಗೌರವ ಸಂಪಾದಕರಾಗಿ ಬಂದಾಗ 6000 – 8000 ಮುದ್ರಣವಾಗುತ್ತಿದ್ದ ಸಪ್ತಗಿರಿ ಈಗ 40000ದವರೆಗೆ ಏರಿದೆ ಎಂದೂ ತಿಳಿಸಿ, ಇದಕ್ಕೆ ಸಂಪಾದಕ, ಉಪಸಂಪಾದಕರ, ಅವಿರತ ಶ್ರಮ ಹಾಗೂ ತಮ್ಮ ಸಲಹೆಗಳನ್ನು ಪಾಟಿಸಿದ ಅವರುಗಳ ಪ್ರಾಮಾಣಿಕ ಯತ್ನವೇ ಕಾರಣವೆಂದು ಅದಕ್ಕಾಗಿ ತಮಗೆ ಹೆಸರು ಬಂದಿತೆಂದೂ ನುಡಿದರು. ಶ್ರೀ ವೆಂಕಟೇಶ್ವರ ಸ್ವಾಮಿಯ ಕೃಪೆಯಿಂದ ಎಲ್ಲವೂ ಸುಗಮವಾಗಿ ಸಾಗಿ, ಎಲ್ಲರೂ ಧನ್ಯರಾಗುವ ಅವಕಾಶ ಏರ್ಪಡೆಯೆಂದೂ ಇದಕ್ಕಾಗಿ ಸ್ವಾಮಿಗೆ ಕೃತಜ್ಞರಾಗಿರ ಬೇಕೆಂದೂ ತಿಳಿಸಿದರು. ★



ಎಡದಿಂದ ಬಲಕ್ಕೆ ಸರ್ವಶ್ರೀ ಪಿ ವಿ. ಆರ್ ಕೆ. ಪ್ರಸಾದ್, ರಾವುಲ ಸೂರ್ಯನಾರಾಯಣಮೂರ್ತಿ, ವಿದ್ವಾನ್ ವಿಶ್ವಂ, ಕೆ. ಸುಬ್ಬಾರಾವ್.




ಬೀಳ್ಕೊಡುಗೆಯ ಸಮಾರಂಭದಲ್ಲಿನ ಪ್ರಮುಖರು ಹಾಗೂ ಸಪ್ತಗಿರಿಯ ಉದ್ಯೋಗಿ ಬೃಂದ.

# ಅಕ್ಟೋಬರ್ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 11. | ಸೋಮವಾರ | ತಿರುಮಲನಂಬಿ ಉತ್ಸವಾರಂಭ |
| 13. | ಬುಧವಾರ | ಮಣವಾಳಮಹಾಮುನಿ ಉತ್ಸವಾರಂಭ |
| 16 | ಶನಿವಾರ | ವೇದಾಂತ ದೇಶಿಕರ ಉತ್ಸವಾರಂಭ |
| 17 | ಭಾನುವಾರ | ಶ್ರೀ ವೆಂಕಟೇಶ್ವರಸ್ವಾಮಿ ನವರಾತ್ರಿ ಬ್ರಹ್ಮೋತ್ಸವಾರಂಭ |
| | | ಶರನ್ನವರಾತ್ರಿ ಆರಂಭ |
| | | ಕಪಿಲೇಶ್ವರಸ್ವಾಮಿ ಸನ್ನಿಧಿಯಲ್ಲಿ ಕಲಶಸ್ಥಾಪನೆ |
| 18. | ಸೋಮವಾರ | ತುಲಾಸಂಕ್ರಮಣ ಪುಣ್ಯದಿನ |
| 20. | ಬುಧವಾರ | ತಿರುಮಲನಂಬಿ ಶಾತ್ತುಮೊರೆ |
| 21 | ಗುರುವಾರ | ಶ್ರೀ ವೆಂಕಟೇಶ್ವರಸ್ವಾಮಿ ನವರಾತ್ರಿ ಗರುಡೋತ್ಸವ |
| 22. | ಶುಕ್ರವಾರ | ಸರಸ್ವತೀಪೂಜೆ, ಮಣವಾಳಮಹಾಮುನಿ ಶಾತ್ತುಮೊರೆ |
| 24. | ಭಾನುವಾರ | ನವರಾತ್ರಿ ಬೆಳ್ಳಿಯ ರಥೋತ್ಸವ |
| 25. | ಸೋಮವಾರ | ಶ್ರೀ ವೆಂಕಟೇಶ್ವರಸ್ವಾಮಿ ನವರಾತ್ರಿ ಬ್ರಹ್ಮೋತ್ಸವ ಅವಭೃತ |
| | | ವೇದಾಂತದೇಶಿಕರ ಶಾತ್ತುಮೊರೆ, ದುರ್ಗಾಷ್ಟಮಿ |
| 26. | ಮಂಗಳವಾರ | ಮಹಾನವಮಿ, ಆಯುಧಪೂಜೆ |
| 27. | ಬುಧವಾರ | ವಿಜಯದಶಮಿ, ಪೂದತ್ತಾಳ್ವಾರ್ ವರ್ಷತಿರುನಕ್ಷತ್ರ |
| 28. | ಗುರುವಾರ | ಪೇಯಾಳ್ವಾರ್ ವರ್ಷ ತಿರುನಕ್ಷತ್ರ |



( 23ನೇ ಪುಟದಿಂದ )

ಭೂಮಿಯು ಸಕಾಲದಲ್ಲಿ ಸಂಪತ್ತು ಕೊಡುತ್ತಿರಲಿಲ್ಲ. ಜನತೆಯು ಅಕಾಲ ಮರಣಕ್ಕೆ ತುತ್ತಾಗುತ್ತಿದ್ದರು. ಅದರಲ್ಲೂ ಉಳಿದ ಜನತೆಯು ಯವನರ ಪಾಶಕ್ಕೆ ಗುರಿಯಾಗುತ್ತಿದ್ದರು. ಶೀತಲವೂ, ಕೃಶವೂ ಆದ ದುಃಖ ಅಸಹಾಯಕತೆ, ಒಣಗಿದ ತುಟಿಗಳ, ಜನಗಳು ಎಲ್ಲೆಡೆ ಕಂಡು ಬರುತ್ತಿದ್ದರು.

'ಮಧುರೆ' ಎಂಬುದು ರುಚಿಸಿದ ರೂಪ ಹೊಂದಿತು, ವೈಭವವನ್ನು ಕಳೆದುಕೊಂಡು ಸತ್ಯ, ಧರ್ಮ, ನೀತಿ, ಧರ್ಮಕಾರ್ಯ, ಮಿರಮಿಸಿದ ಮಧುರೆಯ ಸ್ಥಿತಿಯು ಶೋಚನೀಯವಾಯಿತು.

ಗಂಗಾದೇವಿಯು ಈ ಮಧುರೆಯ ಉತ್ತಮ ಮತ್ತು ಅವನತಿಯ ಸ್ಥಿತಿಯು ದುಃಖ ಮತ್ತು ಹಿಂದಿನದನ್ನು ನಾಶಮಾಡಿದವರ ಬಗ್ಗೆ ರೋಷ ಉಂಟು ಮಾಡುವುದು. ಗಂಗಾದೇವಿ ವಿವರಿಸಿದ ವಿಚಾರಧಾರೆಯಂತೆ, ಸೂಕ್ಷ್ಮವಾಗಿ, ಕೇವಲ ಒಂದು ಸಾಸಿವೆ ಕಾಳಿನಷ್ಟು ಯೋಚಿಸಿದರೆ ಇಂದು ಸಂಭವಿಸುವ ಅನೇಕ ಘಟನೆಗಳಿಗೆ ಕಾರಣ ತಿಳಿಯುವುದು.

ಗಂಗಾದೇವಿ ತನ್ನ ಕೃತಿಯನ್ನು ಕೇವಲ ಅಂದಿನ ಸ್ಥಿತಿಗಾಗಿ ಮಾತ್ರ ರಚಿಸಿಲ್ಲ. ಅದು ಎಂದೆಂದೂ ಹಸಿರಾಗಿರುವಂತೆ ತನ್ನನ್ನು ಓದಿದವರ ಮನಸ್ಸಿಗೆ ತಾವಿರುವ ಸಮಯದ ಸ್ಥಿತಿಯ ಬಗ್ಗೆ ಚಿಂತಿಸುವಂತೆ ಮಾಡುತ್ತದೆ.

ಗಂಗಾದೇವಿ ಎಲ್ಲಾ ವಿಧದಿಂದಲೂ ತನ್ನ ಕೃತಿಯನ್ನು ಎಚ್ಚರಿಕೆಯಿಂದ ರಚಿಸಿ ಸಾಹಸ, ಸೌಂದರ್ಯ, ಸಂಸ್ಕೃತಿ, ಇವುಗಳ ಸಹಜ ಚಿತ್ರಣವನ್ನು ನೀಡಿದ್ದಾಳೆ, ಸ್ತ್ರೀಯು ಒಂದು ಕೃತಿ ರಚನೆಯಿಂದ ಎಷ್ಟು ಪರಿಣಾಮಕಾರಿ ಕಲಸ ಸಾಧ್ಯ ಎಂಬುದನ್ನು ಗಂಗಾದೇವಿ ತೋರಿಸಿಕೊಟ್ಟಿದ್ದಾಳೆ, ಸ್ತ್ರೀ ತನ್ನ ಕೃತಿಯ ಮೂಲಕ ಹೆಚ್ಚು ಹೆಚ್ಚು ವಿಷಯವನ್ನು ಜನತೆಗೆ ಮನವರಿಕೆ ಮಾಡುವುದರಿಂದ ಸುಭದ್ರ ಸಮಾಜ ನಿರ್ಮಾಣ ಸಾಧ್ಯ ಎಂಬುದನ್ನು ಗಂಗಾದೇವಿ ತೋರಿಸಿದ್ದಾಳೆ.



Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy Manager, T. T. D. Press, Tirupati - 517 501.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

| | |
|---|---|
| ವಿಶೇಷ ಪ್ರವೇಶ (ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರತಿಯಸಾಲಿನಲ್ಲಿ ಸೇರುವಿಕೆ) | ರೂ 25–00 |

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ[1] | ರೂ 400 |
| 2. | ಅಭಿಷೇಕ* | ರೂ 500 |
| 3. | ಪುನುಗು* | ರೂ 200 |
| 4. | ಜಾಫ್ರಾ* | ರೂ 100 |
| 5. | ಕಸ್ತೂರಿ* | ರೂ 100 |
| 6. | ಸಹಸ್ರಕಲಶಾಭಿಷೇಕ | ರೂ 3000 |
| 7. | ತಿರುಪ್ಪಾವಡಾ[2] | ರೂ 6000 |
| 8. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 9. | ಮುಕುರ ಮಂಟಪದಲ್ಲಿ ಡೋಲೋತ್ಸವ[2] | ರೂ 1500 |
| 10. | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ[2] | ರೂ 2500 |
| ಪವಿತ್ರೋತ್ಸವ | ರೂ 2500 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1. ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ.

2. ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು

ವಿವರಗಳಿಗೆ: **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

---

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ75–00 |
| ಟಿ.ಬಿ.ಸಿ ಒಳಗಿನ ಕಾಟೇಜುಗಳು | ” | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೂಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ.ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50–00 |
| ಎ.ಟಿ.ಸಿ. ನಂ. 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳಕೋಣೆ | ರೂ 20–00 |
| ನಾಲ್ಕು ” | ರೂ 25–00 |
| ಒಂದು ” | ರೂ 15–00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 50–00 |
| ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನ.